


# ಸಪ್ತಗಿರಿ

ನವಂಬರ್, 1993

ಬೆಲೆ : ರೂ. 2/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



**ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ** || ಪ ||

ನೀ ದೇಹದೊಳಗೊ ನಿನ್ನೊಳು ದೇಹವೊ ಹರಿಯೇ || ಅ.ಪ. ||

ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ, ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೇ || ೧ ||

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೇ || ೨ ||

ಕುಸುಮದಲಿ ಗಂಧವೊ ಗಂಧದಲಿ ಕುಸುಮವೊ
ಕುಸುಮ ಗಂಧಗಳೆರಡು ಆಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ಹರಿಯೇ || ೩ ||

**---ಶ್ರೀ ಕನಕದಾಸರು.**

ಸಂದರ್ಶಿಸಿ. ಆನಂ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 9--11--93 ರಿಂದ 18--11--93 ವರೆಗೆ

**ಕಾರ್ಯಕ್ರಮ ವಿವರ**

| ದಿನಾಂಕ | ದಿನ | ಬೆಳಗ್ಗೆ | ಸಂಜೆ |
|---|---|---|---|
| 9--11--93 | ಮಂಗಳವಾರ | ---- | ಅಂಕುರಾರ್ಪಣೆ |
| 10--11--93 | ಬುಧವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 11--11--93 | ಗುರುವಾರ | ಟಾಂಜಾನ್ ಉತ್ಸವ | ಹಂಸವಾಹನ. |
| 12--11--93 | ಶುಕ್ರವಾರ | ಮುತ್ತಿನ ಚಪ್ಪರವಾಹನ | ಸಿಂಹವಾಹನ. |
| 13--11--93 | ಶನಿವಾರ | ಕಲ್ಪವೃಕ್ಷವಾಹನ | ಹನುಮದ್ವಾಹನ. |
| 14--11--93 | ಭಾನುವಾರ | ಪಲ್ಲಕ್ಕಿ ಉತ್ಸವ :<br>ಸಂಜೆ -- ವಸಂತೋತ್ಸವ | ಗಜವಾಹನ. |
| 15--11--93 | ಸೋಮವಾರ | ಸರ್ವಭೂಪಾಲವಾಹನ | ಗರುಡೋತ್ಸವ. |
| 16--11--93 | ಮಂಗಳವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 17--11--93 | ಬುಧವಾರ | ರಥೋತ್ಸವ | ಅಶ್ವವಾಹನ. |
| 18--11--93 | ಗುರುವಾರ | ತೀರ್ಥವಾರಿ | ಧ್ವಜಾವರೋಹಣ. |

ಸೂಚನೆ: ತಿರುಚಾನೂರು ತಿರುಪತಿಯಿಂದ 6--8 ನಿಮಿಷದ ಹಾದಿ. ಒಂದರ ಹಿಂದೆ ಒಂದು ಬಸ್ ಉಂಟು. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗುತ್ತವೆ. ವಿವರಗಳಿಗಾಗಿ ತಮ್ಮ ಬಳಿಯ ತಿ. ತಿ. ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ತಾವೂ ಬನ್ನಿ | ತಿ. ತಿ. ದೇ. | ತಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು :
ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.
ಸಂಪಾದಕ :
ಕೆ. ಸುಬ್ಬಾರಾವು,ಎಂ. ಎಂ.
ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ. ಎ.,
ಮುದ್ರಣ :
ಎಂ. ವಿಜಯಕುಮಾರ್ ರೆಡ್ಡಿ
ಲೇಖನ ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||

ಸಂಪುಟ - ೨೪ ] ನವಂಬರ್ ೧೯೯೩ [ ಸಂಚಿಕೆ - ೬

# ವಿಷಯಸೂಚಿ

ಸಂಪಾದಕೀಯ ..... 4
ಅನ್ನಲಕ್ಷ್ಮಿಯ ಹಬ್ಬ ದೀಪಾವಳಿ ---ಸಾ. ದೊಡ್ಡಯ್ಯಶಾಸ್ತ್ರಿ ..... 5
ಕೇಳನೋ ಹರಿ...... ---ಕೆ. ಕೇಶವಮೂರ್ತಿ ..... 7
ವಾಸ್ತು ಶಾಸ್ತ್ರೀಯ ಗ್ರಾಮ ಶುಚೀಂದ್ರಂ ---ಗುರುಮೂರ್ತಿ ..... 9
ಆಪಸ್ತಂಬರು ---ಕೆ. ಕೇಶವನ್ ..... 11
ಸಿರಿದೇವಿ ಗೋದಾ ---ಸಂತ ಹರಿಹರಾನಂದ ಸರಸ್ವತಿ ..... 19
ಕವನ ಪತ್ರ --- ..... 21
ಹಂಪಿ ಕ್ಷೇತ್ರವರ್ಣನೆ ---ಡಿ. ರಾಮಕೃಷ್ಣರಾವ್ ..... 23
ಸ್ತೋತ್ರ ---ಎಚ್. ವಿ. ನರಸಿಂಹಮೂರ್ತಿ ..... 29
ರುದ್ರಾಕ್ಷಿಧಾರಣೆ ---ರಘುಸುತ ..... 31
ನಾಳೆ ಎನ್ನುವುದು ಹಾಳು ---ಡಾ|| ಎ. ಜಾನಕಿ ..... 34
ಕಾಶಿಯಲ್ಲಿ ಒಂದು ಮಠ ---ಎ. ಪಂಕಜ ..... 36
ವಾರ್ತಾಲಹರಿ ..... 37

ಮುಖಚಿತ್ರ : ಶ್ರೀ ಪದ್ಮಾವತೀ ಅಮ್ಮನವರು.

ಹಿಂಬದಿಯಲ್ಲಿ : ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ.




ಪ್ರಕೃತಿ ಪ್ರಕೋಪ ಎನ್ನುತ್ತಾರೆ ಅದನ್ನ, ಭೂಮಿ ಬಿರಿಯುವುದು ಎಂದರೇನು, ಭೂಮಿಯ ಮೇಲ್ಪದರ ನಿಂತಿರುವ ಭೂದ್ರವದಲ್ಲಿನ ತಳಗಟ್ಟುಗಳು ತಾಕಲಾಡಿ .ಮೇಲೆ ಕಂಪನವಾಗಿ ವಸ್ತುಗಳುರುಳುತ್ತವೆ. ಅದರ ಆ ತಾಕಲಾಟದ ತೀವ್ರತೆಯನ್ನು ಅಳೆಯಲು ಒಂದು ಯಂತ್ರ -- ಭೂಕಂಪಮಾಪಕ. ಅದರಲ್ಲಿ ಹತ್ತು ಭಾಗ ಕಂಪನ ತೀವ್ರತೆಯ ಮಾಪನಕ್ಕೆ. ಅದರ ಮುಳ್ಳು ಮೇಲೇರಿದಂತೆಲ್ಲ ಭೂಮಿಯ ಮೇಲಿನ ಬದುಕು ಬಡಬಡ. ತಳಕುಸಿಯೆ ನೆಲವಿರದು ಆಧಾರಕ್ಕೆ.

ಏಕೆ ಹೀಗಾಗುತ್ತೆ ಇದನ್ನು ನಿವಾರಿಸುವುದು ಹೇಗೆ -- ಎಲ್ಲ ಆಧ್ಯಾತ್ಮಿಕದ, ವಿಜ್ಞಾನದ ಕನಸಿನ ಜಗತ್ತಿನ ಮಾತು. ಅದನ್ನು ಮೊದಲೇ ಅರಿಯುವುದೂ ದೂರದ ಮಾತೇ, ಇಂದಿನ ಜ್ಞಾನ ಪರಿಧಿಯಲ್ಲಿ. ಮನುಷ್ಯಮಾತ್ರರಾದವರು, ಸರಕಾರಗಳು, ಸೈನ್ಯಗಳು, ಪುರಸಭೆಗಳು -- ಏನು ಮಾಡಿದರೂ ನಂತರ ಮಾಡಬೇಕಾದ್ದೇ. (ಮೊದಲೇ ಭೂಕಂಪ ನಿರೋಧಕ ಭವನಗಳನ್ನು ನಿರ್ಮಿಸಬಹುದು, ತೇಲುವ ತೆಪ್ಪಗಳಂತೆ - ಆದರೆ ಅಲ್ಲೂ ಅನಾನುಕೂಲಗಳಿವೆ -- ಮನುಷ್ಯ ಜೀವನದ ಅಭ್ಯಾಸಗಳಿಗೆ ತಕ್ಕಂತೆ.)

ಮಹಾರಾಷ್ಟ್ರದ ಲಾತೂರು ಜಿಲ್ಲೆಯಲ್ಲಿ ಸೆಪ್ಟಂಬರ್ 30 ರಂದು ಬೆಳಗ್ಗೆ ಮೂರೂ ಮುಕ್ಕಾಲು ಗಂಟೆ ನಾಲ್ಕು ಗಂಟೆಗಳ ಮಧ್ಯೆ ನಡೆದ ಭೂಕಂಪದಲ್ಲಿ ಕಿಲ್ಲಾರಿ , ಲಾತೂರು, ಉಸ್ಮಾನಾಬಾದ್ ಪಟ್ಟಣಗಳೂ ಸುತ್ತಲಿನ ಗ್ರಾಮಗಳೂ ನೆಲವನ್ನು ಕಚ್ಚಿದವು. ನಿದ್ರೆಯಲ್ಲಿಯೇ ನಿಧನರಾದವರೆಷ್ಟೋ,ಅಷ್ಟೇಮಂದಿ ಗಾಯಗೊಂಡರು. ಮಹಾರಾಷ್ಟ್ರದ ದಕ್ಷಿಣದಲ್ಲಿ ಆಂಧ್ರಪ್ರದೇಶ ಕರ್ನಾಟಕಗಳ ಕೂಡುವಳಿಯ ಬಳಿ ಸ್ಥಿತಗೊಂಡು ಭೂಕಂಪ ಕೇಂದ್ರದಿಂದ ಭೂಕಂಪ ಮಾಪಕದಲ್ಲಿ ಆರು ಪಾಯಿಂಟ್‌ಗಳನ್ನು ಮುಟ್ಟಿದ ಈ ಕಂಪನದಿಂದ ಆಂಧ್ರಪ್ರದೇಶ, ಕರ್ನಾಟಕ, ಗೋವಾಗಳೂ ತಲ್ಲಣಗೊಂಡವು. ಅಪಾರವಾದ ಆಸ್ತಿಪಾಸ್ತಿಯ ನಷ್ಟ ಬೇರೆಯೇ ಕಥೆ.

ಭೂಕಂಪದಿಂದಾಗಿ ಏನೇನು ಆಯಿತು ಎಂಬುದನ್ನು ಎಲ್ಲರೂ ಪಟ್ಟಿ ಮಾಡಿದ್ದಾರೆ. ಏನು ಆಗಬೇಕು ಎಂಬುದು ಮುಖ್ಯವಾಗುತ್ತದೆ ಈ ಸಂದರ್ಭದಲ್ಲಿ. ಭೂಕಂಪ ಗ್ರಸ್ತ ನಗರಗಳು ಗ್ರಾಮಗಳು ಪುನಃ ತಲೆಯೆತ್ತಬೇಕಾಗಿವೆ. ಮುಖ್ಯವಾಗಿ ಗಾಯಗೊಂಡವರು, ರಕ್ತಹಾನಿ, ಶಲ್ಯ ವೈಕಲ್ಯಗಳಿಂದ ಬಚಾವಾಗಿ, ಮೊದಲಿನಂತೆ ಬದುಕು ನಡೆಸಲು ಅನುಕೂಲಗಳು ಅಗತ್ಯ ತುರ್ತು ಆದ್ಯತೆ ಪಡೆಯುತ್ತವೆ. ಸೂರಿಲ್ಲದವರಿಗೆ ಸೂರು, ಬದುಕಿನಾಧಾರ ಕಳೆದುಕೊಂಡವರಿಗೆ ಆಧಾರ ಕಲ್ಪನೆಗಳು ತತ್‌ಕ್ಷಣ ಸೃಷ್ಟಿಯಾಗಬೇಕಾದ ಪರಿಸ್ಥಿತಿ. ಈ ಮಾನವೀಯ ಕಾರ್ಯದಲ್ಲಿ ಸರಕಾರಗಳು, ಸೇವಾಸಂಸ್ಥೆಗಳು, ಮುಖ್ಯವಾಗಿ ಶ್ರೀ ಸಾಮಾನ್ಯರು ನಡುಕಟ್ಟಿ ನಿಲ್ಲಬೇಕು. ತಮ್ಮ ತಮ್ಮ ಕೈಂಕರ್ಯವನ್ನು, ಯಥಾಶಕ್ತಿ ಹೃದಯಪೂರ್ವಕ ಸಹಾನುಭೂತಿಯಿಂದ ಸಲ್ಲಿಸಿ ಜೊತೆಯವರೇ ಆದ ಭೂಕಂಪ ತ್ರಸ್ತರನ್ನು ಮೇಲೆತ್ತಲು ಅನುವಾಗಬೇಕು.

ಭೂಕಂಪ -- ಇದು ಮೊದಲನೆಯದೇನಲ್ಲ -- ನಾವೆಲ್ಲ ಎಷ್ಟೇ ಇಷ್ಟಪಟ್ಟರೂ ಇದು ಕೊನೆಯದೂ ಆಗದು. ಇಂತಹ ಒಂದು ದೀರ್ಘ ಇತಿಹಾಸದಲ್ಲಿ ಇಂದು ನಡೆದದ್ದನ್ನು ಕೂಲಂಕಷವಾಗಿ, ಸತ್ಯಸಮೀಪವಾಗಿ ದಾಖಲೆಗೊಳಿಸುವುದು -- ಮುಂದಿನವರಿಗೆ ಈ ದಾಖಲೆಗಳು ಸುಲಭವಾಗಿ ಸಿಗುವಂತೆ ಮಾಡುವುದು ದೀರ್ಘಕಾಲಿಕ ಕ್ರಮಗಳು. ಜೊತೆಗೇ ಭೂಕಂಪವನ್ನು ಮೊದಲೇ ತಿಳಿಯುವ, ಹವಾಮಾನ ವಿವರದಂತೆ ತಿಳಿಯುವ, ವೈಜ್ಞಾನಿಕ ಸಂಶೋಧನೆಯತ್ತ ಗಮನ ಹರಿಸುವುದು ಸೂಕ್ತ. ಆಕಾಶದ ಅಂತರಂಗವನ್ನು ಅರಿಯುವ ಪ್ರಯತ್ನದಂತೆಯೇ ನಾವು ನಿಂತಿರುವ ನಮ್ಮ ಭೂಮಿಯ ಒಳಗನ್ನೂ ಅರಿಯುವ ಪ್ರಯತ್ನವಾಗಬೇಕು. ಆಗ ಮಾತ್ರ ಅಭಿವೃದ್ಧಿ -- ಸಹಾನುಭೂತಿ ಮೊದಲಾದ ಪದಗಳು ಸಾರ್ಥಕವಾದೀತು.

# ಅನ್ನಲಕ್ಷ್ಮಿಯ ಹಬ್ಬ ದೀಪಾವಳಿ

---ಸಾಲೀಮಠ ದೊಡ್ಡಯ್ಯ ಶಾಸ್ತ್ರಿ

ವೇದಗಳಲ್ಲಿ ಅನ್ನವನ್ನು ಜೀವನದ ಆಧಾರ ಎಂದು ಕರೆಯಲಾಗಿದೆ. ಈ ಅನ್ನದ ಹಬ್ಬವೆ ದೀಪಾವಳಿ ಎನಿಸಿದೆ. ಆದ್ದರಿಂದಲೇ ದೀಪಾವಳಿ ಹಬ್ಬವನ್ನು ಕೃಷಿಕರ ಹಬ್ಬವೆಂತಲೂ ಕರೆಯುತ್ತಾರೆ. ಹೊಸ ಧಾನ್ಯ ಆಗತಾನೆ ಮನೆಗೆ ಬಂದಿರುತ್ತದೆ. ಕೊಯಿಲು ಮುಗಿಸಿದ ರೈತ ಮುಂದಿನ ಬೆಳೆಗೆ ಸಿದ್ಧತೆಯಲ್ಲಿ ತೊಡಗಿರುತ್ತಾನೆ. ಅನ್ನಲಕ್ಷ್ಮಿಮನೆತುಂಬಿರುತ್ತಾಳೆ. ಅನ್ನ ಲಕ್ಷ್ಮಿಯ ಸಂಕೇತವಾಗಿ ರೈತರು ದೀವಳಿಗೆಯಂದು ಧಾನ್ಯದರಾಶಿಯನ್ನು ಪೂಜೆ ಮಾಡುವರು.

ಈ ಅನ್ನಲಕ್ಷ್ಮಿ ಪೂಜೆಯ ಮುಖ್ಯ ಸಂಕೇತವೇ -- "ಅನ್ನಕೂಟ". ಅನ್ನಕೂಟವೆಂದರೆ ಅನ್ನದ ರಾಶಿ. ದೀಪಾವಳಿಯ ಮರುದಿನ ಅನ್ನ ಸಿಹಿತಿಂಡಿಯ ಜೊತೆಗೆ ಸಗಣಿಯನ್ನೂ ಇಟ್ಟು ಪೂಜಿಸುವರು. ಇದರ ಜೊತೆಗೆ ವ್ಯವಸಾಯಕ್ಕೆ ಮುಖ್ಯಸಾಧನವಾಗಿರುವ ಆಕಳು ಮತ್ತು ಎತ್ತುಗಳನ್ನು ಪೂಜಿಸುವರು. ಈ ಸಂದರ್ಭದಲ್ಲಿ ವ್ರಜಭೂಮಿನಾಥದ್ವಾರ ದೇವಸ್ಥಾನದಲ್ಲಿ ನಡೆಯುವ ಉತ್ಸವ ಮಹತ್ವಪೂರ್ಣವಾದುದು. ಅಂದು ೧೨೫ ಅನ್ನದ ಮುದ್ದೆಗಳನ್ನು ಇಟ್ಟು ಪೂಜೆಮಾಡುವರು. ನಂತರ ಬಿಲ್ಲವರು ಅವುಗಳನ್ನು ಸಾಂಪ್ರದಾಯಿಕವಾಗಿ ಲೂಟಿ ಮಾಡುವರು. ಉಳಿದ ದೇವಾಲಯಗಳಲ್ಲಿ ಅನೇಕ ವಿವಿಧ ಕಾಳುಗಳನ್ನು ಇಟ್ಟು ನೈವೇದ್ಯ ಮಾಡುವರು.

ಅನ್ನಕೂಟದಲ್ಲಿನ ಗೋವರ್ಧನ ಪೂಜೆಯ ಬಗ್ಗೆ ಅನೇಕ ಕಥೆಗಳು ಪ್ರಚಲಿತದಲ್ಲಿವೆ. ಅವುಗಳಲ್ಲಿ ಮುಖ್ಯವಾದ ಕಥೆ ಈ ರೀತಿ ಇದೆ. ಕೃಷ್ಣನ ಆಗಮನಕ್ಕೆ ಮೊದಲು ಬೃಂದಾವನದ ಜನ ಇಂದ್ರನನ್ನು ಪೂಜಿಸುತ್ತಿದ್ದರು. ಕೃಷ್ಣ ಇದನ್ನು ನಿಲ್ಲಿಸಿದ ಬೃಂದಾವನದಲ್ಲಿರುವ ದೊಡ್ಡದಾದ -- ಗೋವರ್ಧನ ಪರ್ವತದಿಂದ ಜನ ಸಕಲ ಐಶ್ವರ್ಯವನ್ನು ಪಡೆಯುತ್ತಿರುವಾಗ ಇದನ್ನು ಬಿಟ್ಟು ಇಂದ್ರನನ್ನು ಪೂಜಿಸುವ ಅವಶ್ಯಕತೆಯಾದರೂ ಏನು? ಎಂದು ಕೃಷ್ಣ ಇಂದ್ರನ ಪೂಜೆ ನಿಲ್ಲಿಸಿ ಗಿರಿ ಪೂಜೆ ಪ್ರಾರಂಭಿಸಿದ. ಇದರಿಂದ ಇಂದ್ರನಿಗೆ ಸಿಟ್ಟು ಬಂತು. ಒಂದೇ ಸವನೆ ಮಳೆ ಸುರಿಸತೊಡಗಿದ. ಜನರು ಮತ್ತು ಗೋವುಗಳು ದಿಕ್ಕುಪಾಲಾಗಿ ಓಡತೊಡಗಿದವು. ಆಗ ಕೃಷ್ಣ ಗೋವರ್ಧನಗಿರಿಯನು ಬೆರಳಿನಿಂದ ಎತ್ತಿ ಹಿಡಿದು ಸರ್ವರನ್ನು ರಕ್ಷಿಸಿದ. ಇಂದ್ರ ಸೋಲೊಪ್ಪಿದ.

ಗೋವರ್ಧನ ಪೂಜೆಯ ಬಗೆಗಿನ ಇನ್ನೊಂದು ಕಥೆ ಈ ರೀತಿ ಇದೆ. ಗೋವರ್ಧನನೆಂಬ ಗೋಪಾಲಕನೊಬ್ಬ ಇದ್ದ. ಅವನ ಹೆಂಡತಿ ಅತಿಯಾದ ಸೌಂದರ್ಯವತಿ. ದೇವರಿಗೆ ಒಮ್ಮೆ ಅವಳ ಪರೀಕ್ಷೆಯ ಮನಸ್ಸಾಯಿತು. ಸರಿಸಿಂಹರೂಪ ತಾಳಿದ ಸ್ವಾಮಿ ಗೋವರ್ಧನನ ಮನೆ ಕಡೆಗೆ ಸಾಗಿದ. ಸಿಂಹದ ಆಗಮನದಿಂದ ಬೆದರಿದ ಗೋವುಗಳು ಮತ್ತು ಎತ್ತುಗಳ ಕಾಲಿನಡಿಯಲ್ಲಿ ಗೋವರ್ಧನ ಮತ್ತು ಅವನ ಮಕ್ಕಳು ಸಿಕ್ಕುತುಳಿಯಲ್ಪಟ್ಟರು. ಇದರಿಂದ ಸಿಟ್ಟಿಗೆದ್ದ ಗೋವರ್ಧನನ ಹೆಂಡತಿ ಸ್ವಾಮಿಗೆ ಶಾಪ ಕೊಡಲು ಮುಂದಾದಳು. ಆಗ ಸ್ವಾಮಿ ಪ್ರತ್ಯಕ್ಷನಾಗಿ ಅವಳನ್ನು ಸಮಾಧಾನಪಡಿಸಿ ಆದಿನ ಸರ್ವರ ಮನೆಯಲ್ಲಿ ಗೋವರ್ಧನ ಪೂಜೆ ಮಾಡಬೇಕೆಂದು ತಿಳಿಸಿದ. ಅದೇ ಪ್ರಕಾರವಾಗಿ ದೀಪಾವಳಿಯಂದು ಗೋವರ್ಧನ ಮತ್ತು ಆಕಳು ಎತ್ತುಗಳನ್ನು ಸರ್ವರ ಮನೆಗಳಲ್ಲಿ ಪೂಜೆ ಮಾಡುವರು.

ಗೋಪೂಜೆಯ ಬಗ್ಗೆ ಜನಪದದಲ್ಲಿ ಇನ್ನೊಂದು ಕಥೆಯೂ ಇದೆ. ಶಿವಪಾರ್ವತಿ ಒಮ್ಮೆ ಶುಭ್ರವಾದ ಆಕಾಶದಡಿಯಲ್ಲಿ ಕುಳಿತಿದ್ದರು. ಆಗ ಇದ್ದಕ್ಕಿದ್ದಂತೆ ಪಾರ್ವತಿಯ ಮುಖದ ಮೇಲೆ ಒಂದು ಹನಿ ನೀರು ಬಿತ್ತು. ಅದು ಎಲ್ಲಿಂದ ಬಂತು ಎಂದು ನೋಡಲಾಗಿ ಸಮುದ್ರದಲ್ಲಿ ರಾಧಾ ಮತ್ತು ಮಾಧವ ಎಂಬ ಎರಡು ಮೀನುಗಳು ಸಂತಸದಿಂದ ಆಟವಾಡುತ್ತಿರುವುದು ಕಾಣಿಸಿತು. ಇವುಗಳ ಆಟವನ್ನು ನೋಡಿ ಸಂತೋಷಗೊಂಡಪಾರ್ವತಿ ಅವುಗಳನ್ನು ಪೂಜೆ ಮಾಡಬೇಕೆಂದು ಬಯಸಿದಳು. ಮೀನುಗಳಿಗೆ ಇದರ ಅರಿವಾಗಿ "ನಮ್ಮನ್ನು ಏಕೆ ಪೂಜಿಸುತ್ತಿ. ನಮ್ಮಂಥ ಅನೇಕ ಮೀನುಗಳನ್ನು ಹೊಂದಿದ ಸಮುದ್ರನನ್ನು ಪೂಜಿಸು ಎಂದು ಪಾರ್ವತಿಗೆ ಹೇಳಿದವು. ಆಗ ಪಾರ್ವತಿ ಸಮುದ್ರರಾಜನನ್ನು ಪೂಜಿಸಲು ನಿರ್ಧರಿಸಿದಳು. ಆಗ ಸಮುದ್ರರಾಜ ನನ್ನನ್ನೇಕೆ ಪೂಜಿಸುತ್ತಿ. ನಾನು ಶೇಷನಾಗನ ಅಧೀನಕ್ಕೊಳಪಟ್ಟವನು ಎಂದು ಹೇಳಿದ. ಪಾರ್ವತಿ ಶೇಷನಾಗನ ಬಳಿ ಹೋದಳು. ಪಾರ್ವತಿಯಿಂದ ಪೂಜೆ ಮಾಡಿಸಿಕೊಳ್ಳಲು ಶೇಷನಾಗನೂ ಒಪ್ಪಲಿಲ್ಲ. ಶಿವನ ಅಧೀ



## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5--00 | ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 | ಪ್ರಾ 7--00 |
| ತೋಮಾಲ ಸೇವೆ (ಆರ್ಜಿತ) | ಪ್ರಾ 7--30 | ಪ್ರಾ 8--00 |
| ಅರ್ಚನೆ (ಆರ್ಜಿತ) | ಪ್ರಾ 8--00 | ಪ್ರಾ 8--00 |
| ಸರ್ವದರ್ಶನ | ಪ್ರಾ 9--00 | ಪ್ರಾ 12--30 |
| | ಮ. 1--00 | ಸಂ 6--00 |
| | ರಾ. 7--00 | ಪ್ರಾ 8--45 |
| ಏಕಾಂತಸೇವೆ | | ರಾ. 9--00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ. 5--30 ರಿಂದ ಪ್ರಾ. 6--30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| 1. ಗರುಡವಾಹನ | 32--00 |
| 2. ಚಂದ್ರಪ್ರಭ ವಾಹನ | 32--00 |
| 3. ಗಜವಾಹನ | 32--00 |
| 4. ಅಶ್ವವಾಹನ | 32--00 |
| 5. ಸಿಂಹವಾಹನ | 32--00 |
| 6. ಹಂಸವಾಹನ | 32--00 |
| 7. ಚಿಕ್ಕಶೇಷವಾಹನ | 32--00 |
| 8. ದೊಡ್ಡ ಶೇಷವಾಹನ | 62--00 |
| 9. ಸೂರ್ಯಪ್ರಭವಾಹನ | 62--00 |

### ಪಡಿಪ್ರಸಾದಗಳು

| | |
|---|---|
| 1. ದೋಸೆ ಕಾಲಸೋಲ | 35--00 |
| 2. ದಧ್ಯೋದನ „ | 40--00 |
| 3. ಪುಳಿಯೋಗರೆ „ | 50--00 |
| 4. ಪೊಂಗಲು „ | 55--00 |
| 5. ಸಕ್ಕರಪೊಂಗಲ್ „ | 65--00 |
| 6. ಶಾಕರ ಭಾತ್ „ | 85--00 |
| 7. ಕೇಸರಿಭಾತ್ „ | 90--00 |
| 8. ಸೀರ „ | 155--00 |

ವಿವರಗಳಿಗೆ:
ಪೇಷ್ಕಾರ್,
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿ. ತಿ. ದೇ.

ನದಲ್ಲಿರುವ ನಾನು ನಿನ್ನ ಪೂಜೆಗೆ ಅನರ್ಹ ಎಂದು ಹೇಳಿ ಕಳಿಸಿದ. ಪಾರ್ವತಿ ಶಿವನ ಬಳಿಗೆ ಬಂದಳು. ಆಗ ಶಿವ ಬೇಡ, ನಂದಿಯನ್ನು ಪೂಜಿಸು ಎಂದು ತಿಳಿಸಿದ. ಪಾರ್ವತಿ ನಂದಿಯನ್ನು ಪೂಜಿಸಿದಳು. ಅಂದಿನಿಂದ ಆಕಳು ಮತ್ತು ಎತ್ತನ್ನು ದೀಪಾವಳಿಯಂದು ಪೂಜೆಮಾಡುವ ಪದ್ಧತಿ ಪ್ರಾರಂಭವಾಯಿತು.

ಗೋವರ್ಧನಗಿರಿ ಬೃಂದಾವನದಲ್ಲಿಯೇ ಏಕೆ ಇದೆ ಎಂಬುದಕ್ಕೆ ಎರಡು ಕಥೆಗಳನ್ನು ಹೇಳಬ್ಹಾಗುತ್ತದೆ. ಪೌಲಸ್ತ್ಯ ಮುನಿ ದ್ರೋಣಾಚಲದಿಂದ ಗೋವರ್ಧನನನ್ನು ಕರೆದುಕೊಂಡು ಹೊರಟನಂತೆ. ಬೃಂದಾವನವನ್ನು ಸಮೀಪಿಸಿದಾಗ, ಅಲ್ಲಿಯ ಸೃಷ್ಟಿಯ ಸೊಬಗಿಗೆ ಮಾರುಹೋದ ಗೋವರ್ಧನ ಅಲ್ಲಿಯೇ ನೆಲೆಸಲು ನಿರ್ಧರಿಸಿದನಂತೆ. ಗೋವರ್ಧನನ್ನು ಕೃಷ್ಣನ ಅಂಶವೆಂತಲೂ ಕರೆಯುತ್ತಾರೆ.

ಇನ್ನೊಂದು ಕಥೆ ರಾಮಾಯಣದ ಕಾಲಕ್ಕೆ ಸಂಬಂಧಿಸಿದ್ದು. ಲಂಕೆಗೆ ಹೋಗಲು ರಾಮ ಸಮುದ್ರಕ್ಕೆ ಸೇತುವೆ ನಿರ್ಮಿಸಲು ನಿರ್ಧರಿಸಿದ. ಆಗ ಕಪಿಗಳೆಲ್ಲವೂ ತಮ್ಮ ಯಥಾಶಕ್ತಿ ಬೆಟ್ಟ, ಗುಡ್ಡ, ಕಲ್ಲುಗಳನ್ನು ತರಲು ಪ್ರಾರಂಭಿಸಿದವು ಹನುಮಂತ ಉತ್ತರ ಖಂಡದಲ್ಲಿದ್ದ ಗೋವರ್ಧನಗಿರಿಯನ್ನು ಎತ್ತಿಕೊಂಡು ಹೊರಟ. ಆತ ಬೃಂದಾವನಕ್ಕೆ ಬರುವ ವೇಳೆಗೆ ಸೇತುವೆ ಪೂರ್ಣಗೊಂಡಿತ್ತು. ಆಗ ರಾಮ ಸರ್ವರೂ ತಮ್ಮ ಹಸ್ತದಲ್ಲಿ ಇರುವುದನ್ನು ಅಲ್ಲಲ್ಲಿಯೇ ಬಿಡಬೇಕೆಂದು ಆಜ್ಞಾಪಿಸಿದ. ಹೀಗಾಗಿ ಗೋವರ್ಧನಗಿರಿ ಬೃಂದಾವನದಲ್ಲಿಯೇ ಉಳಿಯಿತು.

ಗೋವುಗಳ ಅಭಿವೃದ್ಧಿಗಾಗಿ ಗೋವರ್ಧನ ಪೂಜೆ --ಎಂದೂ ಇನ್ನೊಂದು ವಿವರಣೆ ಇದೆ. ಇದನ್ನು ಗೋವರ್ಧನಪೂಜೆ ಎಂತಲೂ ಹೇಳುವರು. ಅದಕ್ಕಾಗಿಯೇ ಕೃಷಿಯ ಮೂಲಸಾಧನವಾದ ಆಕಳು ಮತ್ತು ಎತ್ತುಗಳನ್ನು ಪೂಜಿಸುವುದು. ಈ ಸಂದರ್ಭದಲ್ಲಿ ಬೃಂದಾವನನಾಥ ದ್ವಾರ ದೇವಸ್ಥಾನದಲ್ಲಿ ನಡೆಯುವ ಉತ್ಸವ ನೋಡುವಂಥದು. ೫೦೦ ಆಕಳುಗಳನ್ನು ಸಿಂಗರಿಸಿ ಮೆರವಣಿಗೆಯಲ್ಲಿ ಕೊಂಡೊಯ್ಯುವರು. ಗೋವುಗಳ ಜೊತೆ ಆಕರ್ಷಕ ಕ್ರೀಡೆಯೊಂದು ಆ ಸಮಯದಲ್ಲಿ ನಡೆಯುವುದು. ಚರ್ಮದ ಬಲೂನುಗಳಲ್ಲಿ ಸಣ್ಣಕಲ್ಲುಗಳನ್ನು ಹಾಕಿ ದನಗಾಹಿಗಳು ಗೋವುಗಳ ಮುಂದೆ ಅಲ್ಲಾಡಿಸುತ್ತ ಶಬ್ದಮಾಡಿ ಅವುಗಳನ್ನು ರೇಗಿಸುವರು. ಆಗ ಅವು ದನಗಾಹಿಯನ್ನು ಇರಿಯಲು ಮುಂದೆ ನುಗ್ಗುವವು. ಇದರಿಂದ ತಪ್ಪಿಸಿಕೊಳ್ಳುತ್ತ ಆತ ತನ್ನ ಆಟವನ್ನು ಮುಂದುವರಿಸುವನು.

ಮಾರನೇ ದಿನ ಗೋವರ್ಧನ ಪೂಜೆ. ಚೌಕದಲ್ಲಿ ದೊಡ್ಡದಾದ ಸಗಣಿರಾಶಿ ಹಾಕುವರು. ನಂದನ ವಂಶದ ಆಕಳೊಂದನ್ನು ಅಲ್ಲಿಗೆ ತಂದು ಅ ಜೊತೆಗೆ ಸರ್ವಗೋವುಗಳನ್ನು ಪೂಜಿ ಮಾ ವರು. ಆದರೆ ಈ ಹಬ್ಬದ ಮುಖ್ಯ ಅಂಶ ದರೆ ಅನ್ನಕೂಟವೇ ಆಗಿದೆ. ಮಹಾಪ್ರಭು ವಲ್ಲ ಚಾರ್ಯ ಈ ಸಂದರ್ಭದಲ್ಲಿ ಅನೇಕ ಬಗೆಯ ಭ ಳನ್ನು ದೇವರಿಗೆ ನೈವೇದ್ಯ ಮಾಡುವ ಸಂಪ್ರದಾ ಪ್ರಾರಂಭಿಸಿದ. ಬೃಂದಾವನವಾಸಿಗಳು ಆಗ ಪ್ರ ಗಾಗಿ ತರುತ್ತಿದ್ದ ಭಕ್ಷ್ಯಗಳ ರಾಶಿಯೇ ಒಂ ಗುಡ್ಡ ದಪ್ಪಾಗುತ್ತಿತ್ತಂತೆ.

ಅಂದಿನಿಂದ ಗೋವರ್ಧನನ ಪೂಜೆ ಮತ್ತು ಕೂಟ ಉತ್ಸವಗಳು ಸರ್ವರನ್ನು ಆಕರ್ಷಿಸತೊ ಗಿದವು. ದೇವಾಲಯಗಳಲ್ಲಿ ಸಹ ದಸರೆಯಿ ದೀಪಾವಳಿವರೆಗೆ ಅನೇಕ ಬಗೆಯ ಭಕ್ಷ್ಯಗಳ ನೈವೇದ್ಯಮಾಡುವರು. ಇದರ ಜೊತೆಗೆ ಛಪ್ಪ ಭೋಜನವನ್ನು ಏರ್ಪಡಿಸುವರು ೫೬ ಗೋಪಿ ಸ್ತ್ರೀಯರು ೫೬ ಬಗೆಯ ಭಕ್ಷ್ಯಗಳನ್ನು ಮಾ ಕೃಷ್ಣನಿಗೆ ಅರ್ಪಿಸಿದ ಸಂಕೇತವಾಗಿ ಈ ಛಪ್ಪ (೫೬) ಭೋಜನವಂತೆ. ಇನ್ನೊಂದು ರೀತಿಯ ಇದನ್ನು ವರ್ಣಿಸುವರು. ತಾವರೆ ಹೂವಿನ ಮೂರು ಭಾಗಗಳಿರುತ್ತವೆ. ಮೊದಲನೆ ಭಾಗದ ಎಂಟು ಎರಡನೆ ಭಾಗದಲ್ಲಿ ಹದಿನಾರು ಮ ಮೂರನೆಯ ಭಾಗದಲ್ಲಿ ೩೨ ಎಸಳುಗಳಿರುತ್ತ ಹೂವಲಿನಲ್ಲಿ ಒಟ್ಟು ೫೬ ಎಸಳುಗಳಿರುತ್ತವೆ. ಇ ಗಳ ಮಧ್ಯದಲ್ಲಿ ಸ್ವಾಮಿ ತಾನೇ ಆಸೀನನಾಗಿರು ನೆಂದು ಪ್ರತೀತಿ.

ಇನ್ನೊಂದು ಕಥೆ ರಾಧೆ ಕೃಷ್ಣರ ಮದುವ ಸಂಬಂಧಿಸಿದ್ದು. ಮದುವೆಯದಿನ ರಾಧೆಯ ತಂ ವಿಶ್ವಭಾನು ೫೬ ಬಗೆಯ ಭಕ್ಷ್ಯಗಳನ್ನು ಮಾಡಿಸಿ ನಂತೆ. ಅಂದಿನ ಸಮಾರಂಭದಲ್ಲಿ ಭಾಗವಹಿಸಿ ವರೂ ೫೬ ಜನ. ಅವರೆಂದರೆ ನಂದ, ಯಶೋ ಕೃಷ್ಣ, ರಾಧ. ಅವಳ ತಂದೆ ವಿಶ್ವಭಾನು, ಅವ ತಾಯಿ ಕಿರಾತರಾಣಿ, ಬಲರಾಮ, ಅವನ ಹೆಂಡ ರೇವತಿ ೯ ನಂದರು ೯ ಜನ ಉಪನಂದರು ಮ ಅವರ ೧೬ ಜನ ಮಡದಿಯರು ಹಾಗೂ ೧೨ ಜ ಇತರರು. ಅಂದಿನಿಂದ ಇದಕ್ಕೆ ೫೬ ಭೋಜ ವೆಂಬ ಹೆಸರು ಬಿದ್ದಿತಂತೆ.

ಇನ್ನೊಂದು ಕಥೆಯ ಪ್ರಕಾರ ರಾವಣನ ಸಂಹರಿಸಿದ ರಾಮ, ಅಯೋಧ್ಯೆಗೆ ಹಿಂತಿರುಗಿ ಮೇಲೆ ಸಂತೋಷಕೂಟವೊಂದನ್ನು ಏರ್ಪಡಿಸಿ ನಂತೆ. ಆಗ ೫೬ ಬಗೆಯ ಭಕ್ಷ್ಯಗಳನ್ನು ತಯ ರಿಸಿದ್ದರಂತೆ. ಅದರಿಂದ ಅನ್ನಕೂಟ ಮತ್ತು ೫ ಭೋಜನಪದ್ಧತಿ ಪ್ರಾರಂಭವಾಯಿತೆಂದೂ ಹೇ ದರು. ಇದರ ಹಿನ್ನಲೆ ಏನೇ ಇರಲಿ ಒಟ್ಟಾರೆ ಹಬ್ಬದ ಉದ್ದೇಶ ಅನ್ನಲಕ್ಷ್ಮಿಯನ್ನು ಪೂಜಿಸುವುದ ಆಗಿದೆ.



ಗಾನಮೇವ ಪರಂ ಮನ್ಯೇ
ಯತೋ ವಿಷ್ಣುಃ ಪ್ರಸೀದತಿ

ಎಂಬುದು ಸ್ಕಾಂದಪುರಾಣದಲ್ಲಿ ಶಿವನ ಉಕ್ತಿ. ಅಂದರೆ ಹಾಡುವಿಕೆಯಿಂದ ವಿಷ್ಣುವು ಪ್ರಸನ್ನನಾಗುತ್ತಾನೆ.

ಮದ್ಭಕ್ತಾ ಯತ್ರ ಗಾಯಂತಿ
ತತ್ರ ತಿಷ್ಠಾಮಿ ನಾರದ

ಅಂದರೆ ನನ್ನ ಭಕ್ತರು ಎಲ್ಲಿ ಹಾಡುತ್ತಾರೋ ಅಲ್ಲಿ ನಾನಿರುತ್ತೇನೆ ಎಂದು ಸಾಕ್ಷಾತ್ ವಿಷ್ಣುವೇ ನಾರದರಿಗೆ ಹೇಳಿದ್ದಾನೆ. ಇದನ್ನೇ ಪುರಂದರದಾಸರು ತಮ್ಮ ಉಗಾಭೋಗವೊಂದರಲ್ಲಿ ಹೀಗೆ ಹಾಡಿದ್ದಾರೆ.

ಮಲಗಿ ಪಾಡಿದರೆ ಕುಳಿತು ಕೇಳುವ
ಕುಳಿತು ಪಾಡಿದರೆ ನಿಂತು ಕೇಳುವ
ನಿಂತು ಪಾಡಿದರೆ ನಲಿದು ಕೇಳುವ
ನಲಿದು ಪಾಡಿದರೆ ಸ್ವರ್ಗವ
ಸೂರೆಬಿಟ್ಟೆನೆಂಬ ಪುರಂದರ ವಿಠಲ

ಇದೆಲ್ಲಾ ಆಗುವುದು ಯಾವಾಗ? ಆ ಹಾಡುವಿಕೆಯಲ್ಲಿ 'ಭಕ್ತಿ' ಇದ್ದಾಗ ಮಾತ್ರ. ಹಾಗಾದರೆ ಭಕ್ತಿ ಎಂದರೇನು?

ಪ್ರೇಮ ಪೂರ್ವಕ ಮನುಧ್ಯಾನಂ
ಭಕ್ತಿರಿತ್ಯಭೀಯತೇ

ಎಂಬುದು ಭಕ್ತಿಗೆ ನಾರದಭಕ್ತಿಸೂತ್ರದ ನಿರ್ವಚನ. ಅಂದರೆ ಪ್ರೇಮಪೂರ್ವಕವಾಗಿ ಭಗವಂತನನ್ನು ಅನುದಿನ ಅನುಚಿಂತನ ಗೈಯ್ಯುವುದೇ ಭಕ್ತಿ. 'ಪ್ರೇಮ' ಎಂದರೆ ಪ್ರೀತಿ. ಭಗವಂತನು ಪ್ರೇಮಸ್ವರೂಪಿ. "ಸಾ ತಸ್ಮಿನ್ ಪರಮ ಪ್ರೇಮರೂಪಾ" ಎನ್ನುತ್ತದೆ ನಾರದ ಭಕ್ತಿಸೂತ್ರ.

'ಪ್ರೀತಿ' ಎಂಬ ಪದ ನಮ್ಮೆಲ್ಲರಿಗೂ ಚಿರಪರಿಚಿತ. ನಾವು ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ. ಪ್ರೀತಿಸಲ್ಪಡುವ ಮತ್ತೊಬ್ಬ ವ್ಯಕ್ತಿ ಯಾರು ಎಂಬುದರ ಮೇಲೆ ಅದಕ್ಕೆ ಪರ್ಯಾಯಪದಗಳಿವೆ. ಮಾತಾಪಿತೃಗಳಿಗೆ ಮಕ್ಕಳ ಮೇಲಿರುವ ಪ್ರೀತಿಯನ್ನು 'ಮಮತೆ' ಎನ್ನುತ್ತಾರೆ. ಅದೇ ಪ್ರೀತಿ ಅಣ್ಣ-- ತಮ್ಮ, ಅಕ್ಕ-- ತಂಗಿಯರದ್ದಾದ 'ವಾತ್ಸಲ್ಯ' ಎನ್ನುತ್ತಾರೆ. ಸ್ನೇಹಿತರಲ್ಲಿದ್ದರೆ, ಒಲುಮೆಯೆಂತಲೂ, ಗಂಡ--ಹೆಂಡಿರಲ್ಲಿದ್ದರೆ ಅನುರಾಗವೆಂತಲೂ, ಪ್ರೇಯಸಿಯಲ್ಲಿದ್ದರೆ 'ಪ್ರಣಯ' ವೆಂತಲೂ ಹೆಸರು. ಅದೇ ಪ್ರೀತಿ ಆ ಕರುಣಾಸಮುದ್ರನಾದ ಭಗವಂತನ ಮೇಲಿದ್ದರೆ ಅದನ್ನೇ 'ಭಕ್ತಿ' ಎನ್ನುತ್ತಾರೆ. ಭಗವಂತ ಭಕ್ತಿಪ್ರಿಯ. ಶ್ರೀ ಲಲಿತಾಮಾತೆಯು "ಭಕ್ತಿ ಪ್ರಿಯಾ ಭಕ್ತಿಗಮ್ಯಾ ಭಕ್ತಿವಶ್ಯಾ ಭಯಾಪಹಾ" ಎಂದು ಶ್ರೀ ಲಲಿತಾ ಸಹಸ್ರನಾಮಸ್ತೋತ್ರದಲ್ಲಿ ಹೇಳಿದೆ. ತನ್ನ ವಿರಾಡ್ರೂಪವನ್ನು ಅರ್ಜುನನಿಗೆ ತೋರಿಸಿದ ಭಗವಂತನು--

# ಕೇಳನೋ ಹರಿ....

---ಯೋಗಾಚಾರ್ಯ ಕೆ. ಕೇಶವಮೂರ್ತಿ.

ನಾಹಂ ವೇದೈಃ ನ ತಪಸಾ
ನ ದಾನೇನ ನ ಚೇಜ್ಯಯಾ
ಶಕ್ಯ ಏವಂ ವಿಧೋ ದ್ರಷ್ಟುಂ
ದೃಷ್ಟವಾನಸಿ ಮಾಂ ಯಥಾ"

ಅಂದರೆ ದೇವದುರ್ಲಭವಾದ ಈ ನನ್ನ ವಿರಾಡ್ರೂಪವನ್ನು ವೇದಗಳಿಂದಾಗಲಿ, ತಪಸ್ಸಿನಿಂದಾಗಲಿ, ಹೋಮದಿಂದಾಗಲಿ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಿಲ್ಲ ಎನ್ನುತ್ತಾನೆ.

ಹಾಗಾದರೆ ಭಗವಂತ ಯಾವುದರಿಂದ ಲಭ್ಯ? ಅವನೇ ಹೇಳಿರುವಂತೆ--

ಭಕ್ತ್ಯಾತ್ವನನ್ಯಯಾ ಶಕ್ಯ
ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ
ಪ್ರವೇಷ್ಟುಂ ಚ ಪರಂತಪ

ಅನನ್ಯವಾದ ಭಕ್ತಿಯಿಂದ ಮಾತ್ರ ಆತನನ್ನು ಯಥಾರ್ಥವಾಗಿ ತಿಳಿದುಕೊಳ್ಳಬಹುದು. ಅಂತಹ ಭಕ್ತರ ಯೋಗಕ್ಷೇಮವನ್ನು ನಾನೇ ಹೊರುತ್ತೇನೆಂದು ಭಗವಂತ ಗೀತೆಯಲ್ಲಿ ಉದ್ಘೋಷಿಸಿದ್ದಾನೆ.

ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್

ಇಂತಹ ಭಕ್ತಿಯು ನವವಿಧವಾಗಿದೆ.

ಶ್ರವಣಂ ಕೀರ್ತನಂ ವಿಷ್ಣೋಃ
ಸ್ಮರಣಂ ಪಾದಸೇವನಮ್
ಅರ್ಚನಂ ವಂದನಂ ದಾಸ್ಯಂ
ಸಖ್ಯಮಾತ್ಮನಿವೇದನಮ್

ಭಗವಂತನ ವಿಚಾರಗಳನ್ನೂ ಆತನ ಲೀಲೆಗಳನ್ನು ಕೇಳುವುದೇ ಶ್ರವಣ. ಅವನನ್ನು ಹಾಡಿ ಹೊಗಳುವುದೇ ಕೀರ್ತನ. ಕಲಿಯುಗಕ್ಕೆ ಭಗವನ್ನಾಮ



ಸಂಕೀರ್ತನೆಯೇ ಅತ್ಯಂತ ಶ್ರೇಷ್ಠವಾದುದು ಎಂದು ಸ್ಮೃತಿಯು ಹೇಳುತ್ತದೆ.

ಕೃತೇಷು ಧ್ಯಾಯತೋ ವಿಷ್ಣುಃ
ತ್ರೇತಾಯಾಂ ಯಜತೋ ಮಖೈಃ
ದ್ವಾಪರೇ ಪರಿಚರ್ಯಯಾ
ಕಲೌ ತತ್ ಹರಿಕೀರ್ತನಾತ್

ಭಗವಂತನ ಸಾಕ್ಷಾತ್ಕಾರವು ಕಲಿಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳಿಂದಲೂ, ದ್ವಾಪರಯುಗದಲ್ಲಿ ಸೇವೆಯಿಂದಲೂ ಕಲಿಯುಗದಲ್ಲಿ ಹರಿನಾಮ ಸಂಕೀರ್ತನೆಯಿಂದಲೂ ಆಗುತ್ತದೆ.

ಇಂತಹ ಕೀರ್ತನೆಯು ಹೇಗಿರದೇಕೆಂಬುದನ್ನು ಅಗ್ರಗಣ್ಯರಾದ ಶ್ರೀ ಪುರಂದರದಾಸರು ತಮ್ಮ ಕೀರ್ತನೆಯೊಂದರಲ್ಲಿ ಹೃದಯಂಗಮವಾಗಿ ನಿರೂಪಿಸಿದ್ದಾರೆ.

ಕೇಳನೋ ಹರಿತಾಳನೋ ತಾಳ
ಮೇಳಗಳಿದ್ದು ಪ್ರೇಮವಿಲ್ಲದ ಗಾನ
ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕರ ಕೂಗಾಟ

ಶ್ರುತಿಗೆ ತಂಬೂರಿ, ಲಯಕ್ಕೆ ಮೃದಂಗ, ಇನಿದಾದ ಕೊಳಲಿನ ಮೆಲ್ಲುಲಿ ಮುಂತಾದ ಪಕ್ಕವಾದ್ಯಗಳೂ ಇರಬಹುದು. ಆದರೆ ಪರಮ ಭಕ್ತಿಯಿಂದ ಹಾಡುವ ತುಂಬುರು ನಾರದರ ಗಾನವನ್ನು ಕೇಳಿ ಪುಳಕಿತನಾದ ಹರಿಯು ಡಂಭಾಚಾರದ ಹಾಡುಗಾರಿಕೆಗೆ ಮರುಳಾಗುವವನಲ್ಲ.

ನಾನಾ ಬಗೆಯ ರಾಗಭಾವ ತಿಳಿದು
ಸ್ವರಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯನಾಮ ರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು

ಹಾಡುವವರು ನಾನಾ ಬಗೆಯ ವಿಶೇಷ ರಾಗಗಳನ್ನು ಅಳವಡಿಸಿಕೊಂಡು, ಸ್ವರಪ್ರಸ್ತಾರ ಮಾಡುತ್ತಾ, ದಶವಿಧ ಗಮಕಗಳನ್ನು ನುಡಿಸುತ್ತಾ ಮನೋಧರ್ಮಮಾರ್ಗ ಸಂಗೀತವನ್ನೇ ಹಾಡುತ್ತಿರಬಹುದು. ಆದರೆ ಸಕಲ ರಾಕ್ಷಸಾಂತಕನಾದ ಶ್ರೀಹರಿಯ ಸ್ಮರಣೆ ಅದರಿಂದಾಗದಿದ್ದರೆ ಆ ಸಾಹಿತ್ಯ ಹೀನವಾದದ್ದು, ಸಂಗೀತ ನಿಂದ್ಯವಾದದ್ದು.

ಅಡಿಗಡಿಗಾನಂದ ಭಾಷ್ಪ ಪುಳಕದಿಂದ
ನುಡಿನುಡಿಗೂ ಶ್ರೀ ಹರಿಯೆನ್ನುತ
ದೃಢಭಕ್ತರನು ಕೂಡಿ ಹರಿಕೀರ್ತನೆ ಹಾಡಿ
ಕಡೆಗೆ ಪುರಂದರ ವಿಠಲನೆಂದರೆ ಕೇಳ್ವ



ಹಾಡುತ್ತಿರುವಾಗ ನಡುನಡುವೆ ಭಕ್ತಿಯ ಆನ... ದೋದ್ರೇಕದಲ್ಲಿ ಕಣ್ಣುಗಳಿಂದ ಆನಂದಭಾಷ್ಪ ಬ... ದೇಕು. ಅರ್ಥಾತ್ ದೇವರಿಗಾಗಿ ಅಳಬೇಕು. ಶ್ರೀ... ರಿಯನಾಮ ಬಾರದ ಸಾಹಿತ್ಯ ಅದು ಸಂಗೀತಸ... ಹಿತ್ಯವೇ ಅಲ್ಲ. ಅದನ್ನೇ ದಾಸರು ಹೀನ ಸಾಹಿ... ಎಂದದ್ದು. ಬಹುಶಃ ಇಂದಿನ 'ಆರ್ಕೆಸ್ಟ್ರಾ' ಇದ... ಉತ್ತಮ ನಿದರ್ಶನವೆನ್ನಬಹುದು. ಕಡೆಗೆ ಇ... ಗಾನವನ್ನು ಪುರಂದರವಿಠಲನ ಪದತಲದಲ್ಲಿ ಸ... ರ್ಪಿಸಿದರೆ ಮಾತ್ರ ಅಂತಹ ಸಂಗೀತವನ್ನು ಆನಂ... ದಿಂದ ಕೇಳಿ ಭಕ್ತರ ಸಕಲ ಇಷ್ಟಾರ್ಥಗಳನ್ನೂ ಅ... ಗ್ರಹಿಸುವ ಕರುಣಾಮಯಿ ಶ್ರೀಹರಿ. ಅಲ್ಲದೆ ಕೇವ... ಡಂಭಾಚಾರಕ್ಕೆ, ಕೀರ್ತಿಗೆ, ಭುಕ್ತಿಗೆ ಹಾಡುವ ಸಂಗೀ... ತವನ್ನು ಆತ ಕೇಳುವುದಿಲ್ಲ ಎಂಬ ದಾಸವಾಣಿ ಸತ್ಯ... ಸತ್ಯ.

ತ್ಯಾಗರಾಜರೂ ಸಹ "ಸಂಗೀತಜ್ಞಾನಮು ಭ... ವಿನಾ ಸನ್ಮಾರ್ಗಮು ಗಲದೆ ಮನಸಾ" ಎಂದು ಹಾ... ದ್ದಾರೆ.

ಇಂದಿನ ಪರಿಸ್ಥಿತಿಯಲ್ಲಿ ದಾಸರವಾಣಿಯನ... ಪರಿಶೀಲಿಸಿದಾಗ ಸಂಗೀತ ಎಷ್ಟರ ಮಟ್ಟಿಗೆ ಸಾರ್ಥ... ಕವಾಗಿದೆ ಎಂಬ ಪ್ರಶ್ನೆ ನಮ್ಮ ಮುಂದೆ ಕಾಡ... ತ್ತದೆ. ಇಂದು ಸಂಗೀತ ಜೀವನೋಪಾಯ... ಕೀರ್ತಿಪ್ರತಿಷ್ಠೆಯ ವಿಷಯವಾಗಿದೆ. ಸಂಗೀತ ಕಚೇ... ರಿಗಳು ಉದರಂಭರಣದ ಒಂದು ಕಾರ್ಯವಾ... ಗಿದೆ. ರಾಮೋತ್ಸವವೇ ಆದಿಯಾಗಿ ವಿಶೇ... ಸಂದರ್ಭಗಳಲ್ಲಿ ಸಂಗೀತ ಕಚೇರಿಯನ್ನು ಏರ್ಪಡಿ... ದರೆ ಕೇಳುವವರೇ ಇರುವುದಿಲ್ಲ ಎಂಬುದು ಸರ್ವ... ದಿತ. ಇದಕ್ಕೆ ಕಾರಣವನ್ನು ಕೇವಲ ಶ್ರೋತೃವರ್ಗ... ಮೇಲೆ ಹಾಕದೆ, ಹಾಡುವವರು ಆತ್ಮಾವಲೋಕ... ಮಾಡಿಕೊಳ್ಳಬೇಕು. ತಮ್ಮ ಸಂಗೀತದಲ್ಲಿ ಎಷ್ಟ... ಮಟ್ಟಿಗೆ ಭಕ್ತಿಯಿದೆಯೆಂದು. ಹಾಡುವ ಗಾನದ... ಭಕ್ತಿಯಿದ್ದರೆ ಅದು ಶ್ರೋತೃವರ್ಗದ ಹೃದಯಾ... ತರಾಳಕ್ಕೆ ಇಳಿದು ಅವರನ್ನು ಭಕ್ತಿ ಪರವಶರನ್ನಾ... ಮಾಡುತ್ತದೆ. ಅಂತಹ ಸಂಗೀತವೇ ನಿಜವಾ... ಸಂಗೀತ. ಅಂತಹ ದೈವೀಸಂಗೀತವನ್ನು ಹಾಡು... ಮನೋಧರ್ಮವನ್ನು ಶ್ರೀಹರಿಯು ನಮಗೆ ದಯ... ಪಾಲಿಸಬೇಕೆಂಬುದೇ ಪುರಂದರರ ವಾಣಿ.



# ವಾಸ್ತು ಶಾಸ್ತ್ರೀಯ ಗ್ರಾಮ

# ಶುಚೀಂದ್ರಂ

---ಗುರುಮೂರ್ತಿ.

ಕನ್ಯಾಕುಮಾರಿಯಿಂದ ಹದಿನೈದು ಕಿಲೋಮೀಟರ್ ದೂರದಲ್ಲಿ ಪೆಲಿಯಾರ್ ನದೀ ತಟದಲ್ಲಿಯ ಸಣ್ಣ ಪಟ್ಟಣವೇ ಶುಚೀಂದ್ರಂ. ಪದಿನೈದನೆಯ ಶತಮಾನದಲ್ಲಿ ಪಾಂಡ್ಯ ರಾಜರು ಈ ನಗರವನ್ನು ಸ್ಥಾಪಿಸಿದರು. ಪಾಂಡ್ಯರೇ ಶುಚೀಂದ್ರಂ ದೇವಾಲಯವನ್ನು ಕಟ್ಟಿ ಪ್ರಾಕಾರದ ದೇವರುಗಳನ್ನು ಪ್ರತಿಷ್ಠಾಪಿಸಿದರು. ಅನಂತರ ಬಂದ ಮಧುರೆಯ ನಾಯಕರು ವಿಶಿಷ್ಟವಾದ ನಗರ ಯೋಜನೆ ಮಾಡಿ ರಸ್ತೆಗಳನ್ನು ದೇವಾಲಯದ ಶಿಖರಾದಿಗೋಪುರಗಳನ್ನು ನಿರ್ಮಿಸಿ ಪರಿಪೂರ್ಣಗೊಳಿಸಿದರು. ನಾಯಕರ ನಂತರ ಹದಿನೇಳನೇ ಶತಮಾನದಲ್ಲಿ ತಿರುವಾಂಕೂರಿನ ಅರಸು ಮನೆತನವು ಪ್ರಬಲವಾದ ಮೇಲೆ ಶುಚೀಂದ್ರಂ ಆ ರಾಜಮನೆತನದ ಆರಾಧ್ಯ ದೈವತವೆನಿಸಿ ಪ್ರಮುಖಸ್ಥಾನ ಪಡೆಯಿತು. ಚಿಕ್ಕ ಊರಾದರೂ ತಿರುವಾಂಕುರಿನ ಅರಸರು ಶುಚೀಂದ್ರಂ ನಗರವನ್ನು ಹಿಂದೂ ವಾಸ್ತುಶಾಸ್ತ್ರ, ಮತ್ತು ಅರಸುಮನೆತನದ ಆರಾಧ್ಯದೈವತಕ್ಕೆತಕ್ಕ ರಾಜನಗರಿಯ ಅನುಕೂಲತೆಗಳು, ಮತ್ತು ಉಳಿದೆಲ್ಲ ನಾಗರಿಕ ಸೌಲಭ್ಯಗಳನ್ನುಗಮನದಲ್ಲಿಟ್ಟುಕೊಂಡು ಪಟ್ಟಣವನ್ನು ಭದ್ರ ಬುನಾದಿಯ ಮೇಲೆ ಶಾಸ್ತ್ರೋಕ್ತವಾಗಿ ಕಟ್ಟಿ ಅಭಿವೃದ್ಧಿ ಪಡಿಸಿದರು.

ಈ ನಗರದ ಪ್ರಮುಖ ಅಂಶಗಳೆಂದರೆ ಮುಖ್ಯ ದೇವಾಲಯ, ಪೂರ್ವ ಪಶ್ಚಿಮ ಶಾಸ್ತ್ರೋಕ್ತ ಸಂಪರ್ಕ ದಾರಿ, ಗೋಲಾಕಾರದ ಮೆರವಣಿಗೆಯ ಬೀದಿ ಮತ್ತು ಪುಷ್ಕರಣಿಗಳು, ನಿಶ್ಚಿತವಾದ ಪರಿಪೂರ್ಣವಾದ ವಾಸ್ತು ಕಲ್ಪನೆಯನ್ನು ಸಾಧ್ಯಗೊಳಿಸಿವೆ.

ಭಾರತೀಯ ವಾಸ್ತುಶಾಸ್ತ್ರದ ಪ್ರಕಾರ ನಗರ ರಚನೆ, ಪ್ರಾಸಾದ ರಚನೆ ಮತ್ತು ದೇವಾಲಯಗಳ ರಚನೆ ಮಾಡಿದಾಗ ಕೆಲ ದಿಗ್ ಭಾಗಗಳಲ್ಲಿ ಉಂಟಾಗುವ ಬಯಲುಗಳು, ವೃಕ್ಷವಾಟಿಕೆಗಳು, ಏರಿಳಿತಗಳು ಸ್ವಾಭಾವಿಕವಾಗಿಯೇ ನಾಗರಿಕರ ಬದುಕನ್ನು ಸಹನೀಯಗೊಳಿಸುತ್ತವೆ. ಆಧುನಿಕ ಯೋಜನೆಗಳು ಈ ಅಂಶಗಳನ್ನು ಅಲಕ್ಷಿಸುವುದರಿಂದ ನಗರಜೀವನ ಅಸಹ್ಯವಾಗಿದೆ. ಈ ವಿಧಿ ವಿಸ್ತಾರಗಳು ನಾಲ್ಕು ಪ್ರಮುಖ ಅಂಶಗಳ ಮೇಲೆ ಆಧಾರಿತವಾಗುತ್ತದೆ. ಒಂದು ಕೇಂದ್ರದೆಡೆಗೆ ಮತ್ತು ಅದರೊಳಗೆ ಪರಿಚಲನೆ, ಕೇಂದ್ರದ ಸುತ್ತ ಚಲನ, ಕೇಂದ್ರದಿಂದ ಹೊರ ಚಲನ ಮತ್ತು ದೂರ ಗಮನ ಈ ಎಲ್ಲಾ ಅಂಶಗಳನ್ನು ಗಮನಿಸಿ ನಿರ್ಮಿಸಲ್ಪಟ್ಟ ಶುಚೀಂದ್ರಂ ನಗರವು ನಾಗರಿಕರಿಗೆ ವಿಶೇಷವಾದ ಸ್ಪಂತಿಕೆಯನ್ನು ನೀಡುತ್ತದೆ.

ಇಲ್ಲಿಯ ಪೂರ್ವ ಪಶ್ಚಿಮ ಬೀದಿಯು ಪೆಲಯರ್ ನದಿಯಿಂದ ನಗರಕ್ಕೆ ಸೇರುತ್ತದೆ. ಊರ ಕೇಂದ್ರ ಬಿಂದುವಾದ ದೇವಾಲಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಆ ಕೇಂದ್ರದ ಪ್ರಾಮುಖ್ಯತೆಯನ್ನು ಹೆಚ್ಚಿಸುತ್ತಾ ಈ ದಾರಿ ನಡೆಯುತ್ತದೆ. ಇಕ್ಕೆಲಗಳಲ್ಲಿ ಸಾಧಾರಣವಾದ ಎರಡಂತಿಸ್ತಿನ ಮನೆಗಳಿರುವ ಈ ಬೀದಿಯಲ್ಲಿ ಬಹುತೇಕ ಬ್ರಾಹ್ಮಣೇತರರು ವಾಸಿಸುತ್ತಾರೆ. ಈ ಬೀದಿಯಿಂದ ನೋಡಿದರೆ ಮುಖ್ಯವಾದ ದೇವಾಲಯದ ಬಣ್ಣ ಬಣ್ಣದ ಗೋಪುರವು ಎಲ್ಲಿಂದಲಾದರೂ ಕಾಣುತ್ತದೆ. ಈ ಬೀದಿಯು ದೇವಾಲಯದ ಸನಿಹಕ್ಕೆ ಹೋಗುತ್ತಿದ್ದಂತೆ ವಿಶಾಲವಾಗುತ್ತಾ ಹೋಗಿ ದೊಡ್ಡ ಮಂಟಪದ ಚೌಕದಲ್ಲಿ ಸೇರುತ್ತದೆ. ಮಂಟಪದ ಪೀಠವು ಸೂಕ್ತವಾಗಿ ಬೀದಿಯನ್ನು ಬೇರ್ಪಡಿಸುತ್ತದೆ. ಈ ಪೀಠವನ್ನು ದಾಟಿದ ಪಥಿಕನು ಮಹಾದ್ವಾರದ ಮೂಲಕ ದೇವಾಲಯ ಪ್ರವೇಶ ಮಾಡಬಹುದು. ಉತ್ಸವಗಳು ಹೊರಟಾಗ ದೇವರನ್ನು ಹೊತ್ತ ಪಲ್ಲಕ್ಕಿಯವರು ನದೀಮುಖವಾಗಿ ಹೋಗುತ್ತಾ ಮನೆ ಮನೆಯ ಮುಂದೆ ಅರತಿಗಾಗಿ ನಿಲ್ಲುತ್ತಾ, ವೀಧಿಯ ಕೊನೆಯ ತಗ್ಗು ಮಂಟಪ ಸೇರಿ ವಿಶ್ರಮಿಸಿ ಅಲ್ಲಿಂದ ಬೇರೊಂದು ಮಾರ್ಗದಲ್ಲಿ ಪಯಣಿಸಿ ಮೂಲಸ್ಥಾನ ಸೇರುತ್ತಾರೆ. ಬೆಳಗಿನ ಉತ್ಸವವಾದರೆ ಎಲ್ಲಿಯೂ ನಿಲ್ಲದೇ ನದೀತಟಕ್ಕೆಸೇರಿ ಉದಯ ಸೂರ್ಯನ ಆರಾಧನೆ ಮಾಡಿ ಮರಳುವಾಗ ಮನೆ ಮನೆಯ ಆರತಿಗೆ ನಿಲ್ಲುವುದು ವಾಡಿಕೆ.

ದೇವಾಲಯವನ್ನು ಸುತ್ತಿಬರುವ ಪ್ರದಕ್ಷಿಣ ರಥ ಬೀದಿಯ ಕಲ್ಪನೆಯೂ ಅಪೂರ್ವವಾದದ್ದು. ಬೀದಿಯ ವೃತ್ತ ಆವೃತ್ತಗಳ ಅನುಭವದಿಂದ ಪ್ರದಕ್ಷಿಣೆಯ ಭಾವ ಮೂಡುತ್ತದೆ. ಎರಡು ಭಿನ್ನವಾದ ವಸ್ತುಗಳ ನಡುವೆ ನಾವು ತೇಲಿ ಹೋದ ಅನುಭವ ವಾಗುತ್ತದೆ.

ಈ ನಗರದಲ್ಲಿ ನಡೆವ ಮೂರು ಮುಖ್ಯ ಹಬ್ಬಗಳ ಆಚರಣೆಯಲ್ಲಿ ಉತ್ಸವಗಳು ೭೨ ಬಾರಿ ಪ್ರದಕ್ಷಿಣೆ ಮಾಡುತ್ತವೆ. ೨೧೬ ಸಣ್ಣಪುಟ್ಟ ಉತ್ಸವಗಳು ನಡೆಯುತ್ತವೆ. ತೀರ ಸರಳ ಪ್ರದಕ್ಷಿಣೆಯೆಂದರೆ ಪಲ್ಲಕ್ಕಿಯ ಜೊತೆ ಒಬ್ಬ ದೀವಟಿಗೆ ಮತ್ತು ಪೂಜಾರಿ ಇರುತ್ತಾರೆ. ಅವರು ಎಂಟು ದಿಕ್ಪಾಲಕ ಸ್ಥಾನಗಳಲ್ಲಿ ನಿಲ್ಲುತ್ತಾರೆ. ಅಲ್ಲದೆ ಮತ್ತೆರಡು ಬಲಿಸ್ಥಾನಗಳಲ್ಲೂ ನಿಲ್ಲುತ್ತಾರೆ ಮತ್ತು ಮೂಲಸ್ಥಾನಕ್ಕೆ ಮರುಳುತ್ತಾರೆ.

ರಥೋತ್ಸವ ಸಂದರ್ಭದಲ್ಲಿ ಉತ್ಸವದ ಎಂಟನೆಯ ದಿನ ಶಿವನನ್ನು ಹೂವಿನ ಮಂಟಪ ವಾಹನದಲ್ಲಿ ಕುಳ್ಳಿರಿಸಿ ಪಲ್ಲಕ್ಕಿಯನ್ನು ಪ್ರಗತಿಯಲ್ಲಿ ಒಯ್ಯಲಾಗುತ್ತದೆ. ಈಶಾನ್ಯ ದಿಕ್ಕಿಗೆ ಸೇರಿದೊಡನೆ ಪಲ್ಲಕ್ಕಿ ಹೊತ್ತವರು ಪಲ್ಲಕ್ಕಿಯನ್ನು ಎತ್ತುತ್ತಾ ಇಳಿಸುತ್ತಾ ಗತಿಬದ್ಧವಾಗಿ ನರ್ತಿಸುತ್ತಾರೆ. ಅನಂತರ ಅಲ್ಲಿಯ ನಟರಾಜನಿಗೆ ಪ್ರದಕ್ಷಿಣೆ ಹಾಕಿ ಮುಂದೆ ಹೋಗುತ್ತಾರೆ. ಒಂಭತ್ತನೇ ದಿನ ಇದೇ ಸ್ಥಳದಲ್ಲಿ ರಾತ್ರಿ ವಿಸ್ತಾರವಾದ ನೃತ್ಯಕಾರ್ಯಕ್ರಮ ನಡೆದು ಮೂಲ ಸ್ಥಾನಕ್ಕೆ ಮರಳುತ್ತದೆ. ಪಕ್ಕದೂರಿನಿಂದ ಬಂದ ಪಲ್ಲಕ್ಕಿಗಳು ನೃತ್ಯಾನಂತರ ದಿಕ್ಕು ದಿಕ್ಕಿಗೆ ಚದುರಿ ಅದೃಶ್ಯವಾಗುವುದೇ ನಗರ ವಾಸ್ತುವಿನ ಅನುಕೂಲ ಮತ್ತು ವೈಶಿಷ್ಟ್ಯ.

ಇಲ್ಲಿಯ ರಥೋತ್ಸವವು ಒಂಭತ್ತನೆ ದಿನ ನೆರವೇರುತ್ತದೆ. ಶುಚೀಂದ್ರದ ವಾಸ್ತು ಕಲ್ಪನೆಯ ಸಂಪೂರ್ಣ ಅನುಭವವನ್ನು ಪಡೆಯಲು ಈ ರಥೋತ್ಸವದಲ್ಲಿ ಪಾಲ್ಗೊಳ್ಳಬೇಕು. ಒಂದೇ ಬಾರಿ ನಾಲ್ಕು ತೇರುಗಳು ಒಂದಕ್ಕಿಂತ ಒಂದು ಕೊಂಚ ಕೊಂಚ ಚಿಕ್ಕದು ಇರುತ್ತವೆ. ಸ್ವಾಮಿ ತೇರಿನಲ್ಲಿ ಸ್ಥಾಣುಸ್ವಾಮಿ, ಅಮ್ಮನ್ ತೇರಿನಲ್ಲಿ ಪಾರ್ವತೀದೇವಿ, ಪಿಳ್ಳೆಯಾರ ತೇರಿನಲ್ಲಿ ಶ್ರೀ ವಿಷ್ಣುಮೂರ್ತಿ ಮತ್ತು ಛಪ್ಪ ತೇರಿನಲ್ಲಿ ಇಂದ್ರನನ್ನು ಕೂಡಿಸುತ್ತಾರೆ. ತೇರಿನ ಶಿಲ್ಪದಲ್ಲಿ ದೇವಾಲಯ ಶಿಲ್ಪದ ಸೂತ್ರಗಳೆಲ್ಲವನ್ನು ಅಳವಡಿಸಿರುತ್ತಾರೆ. ಇಂತಹ ಅಣುರೂಪಿ ದೇವಾಲಯವನ್ನು ನಗರದ ನಾಲ್ಕು ಬೀದಿಗಳಲ್ಲಿ ಸಮಸ್ತರೂ ಸೇರಿ ಎಳೆಯುತ್ತಾರೆ. ಈ ನಗರದಲ್ಲಿ ದಕ್ಷಿಣ ವೀಧಿಯು ಸುರಂಗದಂತಿದೆ. ಆದರೆ ಉತ್ತರ ವೀಧಿಯ ಕೊನೆಯು ನೇರವಾಗಿ ಗದ್ದೆ ಮಾಗಾಣಿಯ ಕಡೆ ಕೊಂಡೂಯ್ಯುತ್ತದೆ. ಅನ್ಯಗ್ರಾಮದ ಪರಿಪೆ ದೇವರುಗಳು ಇಲ್ಲಿಂದ ಮೂರು ಕಡೆಗೆ ಚದುರಿ ಹೋಗುವುದಂತೂ ಅತ್ಯಂತ ನಾಟಕೀಯವಾಗಿದೆ.

ದೇವಾಲಯ ಮತ್ತು ಪುಷ್ಕರಣಿಯ ಅವಿನಾ



# ಆರ್ಜಿತ ಸೇವಾಶುಲ್ಕದಲ್ಲಿ ಏರಿಕೆ

ಹೆಚ್ಚುತಿರುವ ಸರ್ವವಿಧ ವೆಚ್ಚಗಳಿಂದಾಗಿ ಹಲವು ಸೇವೆಗಳ ಶುಲ್ಕವನ್ನು ಏರಿಸಬೇಕೆಂದು ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ. ಪರಿಷ್ಕೃತವಾದ ಈ ದರಗಳು ಈಗ ಜಾರಿಯಲ್ಲಿವೆ.

| ಸೇವೆಯ ಹೆಸರು | ಹಿಂದಿನ ಶುಲ್ಕ | ಪರಿಷ್ಕೃತ ಶುಲ್ಕ |
|---|---|---|
| ಸುಪ್ರಭಾತ | ರೂ. 50=00 | ರೂ. 100=00 |
| ತೋಮಾಲಸೇವೆ | ರೂ. 100=00 | ರೂ. 200=00 |
| ಸಹಸ್ರನಾಮಾರ್ಚನೆ | ರೂ. 100=00 | ರೂ. 200=00 |
| ಏಕಾಂತಸೇವೆ | ರೂ. 50=00 | ರೂ. 100=00 |
| ಆಮಂತ್ರಣೋತ್ಸವ | ರೂ. 400=00 | ರೂ. 600=00 |
| ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ. 500=00 | ರೂ. 750=00 |
| ಪುನುಗು ಬಟ್ಟಲು | ರೂ. 200=00 | ರೂ. 300=00 |
| ಕಸ್ತೂರಿ ಬಟ್ಟಲು | ರೂ. 100=00 | ರೂ. 150=00 |
| ನಿಜಪಾದದರ್ಶನ | ರೂ. 50=00 | ರೂ. 100=00 |
| ಪ್ರತ್ಯೇಕ ಕಲ್ಯಾಣೋತ್ಸವ | ರೂ. 500=00 | ರೂ. 750=00 |

# ವಸತಿಗಳ ಶುಲ್ಕ ಏರಿಕೆ

ತಿರುಮಲೆಯಲ್ಲಿ ವಸತಿ ಸೇವಾಶುಲ್ಕವನ್ನು (ಬಾಡಿಗೆ)ಯನ್ನು ಕೆಳಕಂಡಂತೆ ಏರಿಸಲಾಗಿದೆ. ಯಾತ್ರಿಕ ಬಂಧುಗಳು ಈಗ ಜಾರಿಯಲ್ಲಿರುವ ಸೇವಾಶುಲ್ಕವನ್ನು ಗಮನಿಸಬೇಕೆಂದು ಕೋರಲಾಗಿದೆ. ಎಸ್.ಪಿ. ನಗರದಲ್ಲಿನ ವಸತಿಗಳ ಬಾಡಿಗೆ (ಸೇವಾಶುಲ್ಕ) ವನ್ನು ಎರಡರಷ್ಟಾಗಿಸಲಾಗಿದೆ.

| ವಸತಿ ವಿವರ | ಹಿಂದಿನ ಶುಲ್ಕ | ಈಗಣ ಶುಲ್ಕ |
|---|---|---|
| ಎನ್. ಜಿ. ಸಿ.<br>ಎಸ್. ವಿ. ಜಿ. ಎಚ್. | ರೂ. 100=00 | ರೂ. 200=00 |
| ಎನ್. ಜಿ. ಜಿ. ಎಚ್.<br>ಟಿ. ಬಿ. ಸಿ. ಒಳಗಡೆ | ರೂ. 50=00 | ರೂ. 100=00 |
| ವಿ. ವಿ. ಸಿ. ಮತ್ತು ಎಂ. ಬಿ. ಸಿ.ಯ<br>ಎಲ್ಲಡಿಲಕ್ಸ್ ಕಾಟೇಜುಗಳು | ರೂ. 70=00 | ರೂ. 150=00 |

ಯಾತ್ರಿಕರು ಆರ್ಜಿತ ಸೇವೆ ಹಾಗೂ ವಸತಿ ಶುಲ್ಕಗಳನ್ನು ಗಮನಿಸಿ ಸಹಕರಿಸಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

ಭಾವ ಸಂಬಂಧವೂ ಚಮತ್ಕಾರದಂತಿದೆ. ಬೆಳಗಿನಲ್ಲಿ ಎದ್ದ ಭಕ್ತನು ದೇವಾಲಯದ ಮಬ್ಬು ಬೆಳಕಿನ ಅವರಣದಿಂದ ಉತ್ತರ ಬಾಗಿಲ ಮೂಲಕ ನಿಚ್ಚಳ ಬೆಳಕಿಗೆ ಬಂದು ಪುಷ್ಕರಿಣಿಯ ಮೆಟ್ಟಿಲಿಳಿದು ಸ್ನಾನ ಮಾಡಿ ಹಿಂದಿರುಗಿ ಮಬ್ಬು ಬೆಳಕಿನ, ನಾದಮಯ ದೇವಾಲಯ ಪ್ರಾಂಗಣಕ್ಕೆ ಬರುವುದೇ ಒಂದು ದಿವ್ಯ ಅನುಭವವೆನಿಸುತ್ತದೆ. ಜೀವಿಯ ಪಂಚೇಂದ್ರಿಯಗಳ ಅನುಭವ ಗಮ್ಯತೆಯ ಪ್ರತಿಫಲನವೇ ಈ ವಾಸ್ತು ಪದ್ಧತಿಯಲ್ಲಿ ಸಿದ್ಧಿಯಾಗುತ್ತದೆ. ಎತ್ತರದ ಗೋಪುರ, ನಿಯಮಬದ್ಧವಾದ ಹೊರಾವರಣ ಮತ್ತು ಒಳಾವರಣಗಳು. ಒಳ ಹೊರಗಿನ ಬಯಲುಗಳು, ಎದುರಿನ ನಿಮ್ನೋದರ ಪುಷ್ಕರಿಣಿ, ಸುತ್ತ ಮುತ್ತಲಿರುವ ನಾನಾವಿಧ ಕಟ್ಟಡಗಳ ನಡುವೆ ನೀರಿನ ಆಟದ ನೋಟ.

ತೆಪ್ಪೋತ್ಸವದ ಕಾಲದಲ್ಲಿ ಈಶಾನ್ಯ ಭಾಗದಲ್ಲಿ ತೆಪ್ಪದಲ್ಲಿ ದೇವರನ್ನು ಕೂಡಿಸುತ್ತಾರೆ. ನೈರುತ್ಯ ದಿಕ್ಕಿನಲ್ಲಿ ಬಾಣ ಬಿರುಸುಗಳ ರಂಗಿನಾಟ ನಡೆಯುತ್ತದೆ. ತೆಪ್ಪವು ನಾದ ನೃತ್ಯಗಳ ನಡುವೆ ಪುಷ್ಕರಿಣಿಯಲ್ಲಿ ಮೂರು ಸುತ್ತು ಬರುತ್ತದೆ. ಶುಚೀಂದ್ರಂ ನಲ್ಲಿ ಅದ್ಭುತ ವಾಸ್ತುವಿನ ಜೊತೆಗೆ ಆಧ್ಯಾತ್ಮಿಕ ಅನುಭವವನ್ನು ಅನೇಕ ಪ್ರದಕ್ಷಿಣೆಗಳ ಮೂಲಕ ಪಡೆಯಬಹುದು.

ತನ್ನ ನಿತ್ಯಾನುಷ್ಠಾನಗಳ ಧ್ವನಿ ಮತ್ತು ಪ್ರಶಾಂತಿಯಿಂದ ದೇವಾಲಯವು ಊರಿನ ಹೃದಯವೆನಿಸುತ್ತದೆ. ಊರಿನ ನಾಲ್ಕು ದಿಕ್ಕಿಗಿರುವ ಅಮ್ಮನ ಗಡಿಗಳು ಊರಿನ ಗಡಿಗಳನ್ನು ನಿರ್ಧರಿಸಿವೆ. ಇಲ್ಲಿಯ ವಾಸ್ತು ಭಾರತೀಯ ವಾಸ್ತುಶಾಸ್ತ್ರಜ್ಞಾನ ಸಾಮಾಜಿಕ ಪ್ರಜ್ಞೆಗೆ ಅಪೂರ್ವ ಸಾಕ್ಷಿಯಾಗಿದೆ. ನಿರಂತರ ನಗರೀಕರಣ, ಔದ್ಯೋಗೀಕರಣ ಮತ್ತು ಕೋಮುವಾದಗಳ ನಡುವೆ ಶುಚೀಂದ್ರಂ ನೀಡುವ ಪಾಠಗಳು ಅಮೂಲ್ಯವಾಗಿವೆ. ಭಾರತೀಯ ವಾಸ್ತುಶಾಸ್ತ್ರವು ಜೀವಿಗೆ ಹೆಮ್ಮೆಯನ್ನು, ಸ್ವಂತಿಕೆಯನ್ನು ನೀಡಬಲ್ಲ ಶಕ್ತಿಯನ್ನು ಪಡೆದಿದೆಯೆಂಬುದಕ್ಕೆ ಶುಚೀಂದ್ರಂ ಅದ್ಭುತ ಸಾಕ್ಷಿಯಾಗಿದೆ.



# ಮಹರ್ಷಿ ಆಪಸ್ತಂಬರು

---ಕಂದಾಡೈ ಕೇಶವನ್.

## ಜೀವನ

ಮಹರ್ಷಿ ಆಪಸ್ತಂಬರು ಭೃಗುವಂಶದಲ್ಲಿ ಹುಟ್ಟಿದವರು. ಇವರು ನರ್ಮದಾ ತೀರದಲ್ಲಿ ರಮಣೀಯವಾದ ಆಶ್ರಮವನ್ನು ಕಟ್ಟಿಕೊಂಡು, ಅನೇಕ ಮಂದಿ ಶಿಷ್ಯರೊಡನೆ ಕೂಡಿಕೊಂಡು ಯಜ್ಞ ಯಾಗಾದಿಗಳನ್ನು ಮಾಡಿಸುತ್ತಾ ಅಸಂಖ್ಯಾತ ಶಿಷ್ಯರಿಗೆ ಪಾಠ ಪ್ರವಚನಾದಿಗಳನ್ನು ನೀಡುತ್ತಾ, ವೇದ ಉಪನಿಷತ್‌ಗಳ ವ್ಯಾಖ್ಯಾನಗಳನ್ನು ತನ್ನ ಶಿಷ್ಯರಿಗೆ ಬೋಧಿಸುತ್ತಾ ಕಾಲಕ್ಷೇಪವನ್ನು ಮಾಡುತ್ತಿದ್ದರು. ಅವರ ಪತ್ನಿ ಅಕ್ಷಸೂತ್ರೆ ತನ್ನ ಪತಿಗೆ ಅನುಗುಣವಾಗಿ ಪತಿಪರಾಯಣಳಾಗಿ, ಶಿಷ್ಯರಿಗೆ ಮಾತೆಯಾಗಿ ಅನ್ನಪೂರ್ಣಳಾಗಿ ಆಶ್ರಮದಲ್ಲಿ ಅತಿಥಿಗಳಿಗೆ ಅನ್ನದಾತಳಾಗಿ, ಪತಿಯ ಸಾನ್ನಿಧ್ಯದಲ್ಲಿ ಸುಖ ಸಂಸಾರವನ್ನು ನಡೆಸುತ್ತಿದ್ದಳು. ಆಪಸ್ತಂಬರು ಮಗ ಕರ್ಕಿ, ತಂದೆಯವರಿಗೆ ವಿಧೇಯನಾಗಿ ಮೂಲೆ ಮೂಲೆಗಳಿಂದ ಬಂದ ವಿಪ್ರರಿಗೆ ಊಟ, ವಸತಿ, ವಿದ್ಯಾರ್ಜನೆಗಾಗಿ ಬಂದ ಪಂಡಿತರಿಗೆ, ಜಿಜ್ಞಾಸುಗಳಿಗೆ, ಅನುಕೂಲಗಳನ್ನು ಕಲ್ಪಿಸುವುದರಲ್ಲಿ ತನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತಿದ್ದನು. ನಿತ್ಯವೂ ನಿರಂತರವೂ ನೂರಾರು ಋಷಿಗಳ ನಿತ್ಯಕರ್ಮಾನುಷ್ಠಾನಗಳಿಗೆ ಅಡ್ಡಿ ಬಾರದಂತೆ ನಡೆಸಿಕೊಂಡು ಹೋಗುವ ಸಾಧ್ವೀ ಸತೀಮಣಿ ಅಕ್ಷಸೂತ್ರೆ, ತಂದೆಗೆ ತಕ್ಕಂತಹ ಸುತ ಕರ್ಕಿ, ಇವರ ಸಹಕಾರದಿಂದ ಮಹರ್ಷಿ ಆಪಸ್ತಂಬರು ಸಕಲ ಋಷಿಗಳಿಗೆ ಜ್ಞಾನಭಿಕ್ಷೆಯನ್ನು ನೀಡುತ್ತಿದ್ದರು. ಅನೇಕ ಪಂಡಿತರು, ಋಷಿಗಳು, ದಾರ್ಶನಿಕರು, ತತ್ವವಾದಿಗಳು ಆಪಸ್ತಂಬರ ಆಶ್ರಮದಲ್ಲಿ ಪ್ರಾಥಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಮಹರ್ಷಿಯ ಸಾನ್ನಿಧ್ಯದಲ್ಲಿ ಧರ್ಮ ಸಂದೇಹಗಳನ್ನು ಕೇಳಿ ನಿವಾರಿಸುಕೊಳ್ಳುತ್ತಿದ್ದರು. ಲೋಕ ಹಿತಕ್ಕಾಗಿ ಶಿಷ್ಯರ ಪ್ರೇರಣೆಯಿಂದ ತೈತ್ತರೀಯ ಕೃಷ್ಣ ಯಜುರ್ವೇದದ ಶಾಖಾವಲಂಬಿಗಳಿಗೆ ಹಿತಕ್ಕಾಗಿ ಧರ್ಮ, ಗೃಹ್ಯ, ಶ್ರೌತ ಸೂತ್ರಗಳನ್ನು ರಚಿಸಿ ಅವರ ಅರ್ಥ, ಪ್ರಯೋಜನಗಳನ್ನು ವಿವರಿಸಿ ಮೆರೆಯುತ್ತಿದ್ದರು. ಇವರು ಬರೆದ ಗೃಹ್ಯಸೂತ್ರ, ಮಂತ್ರಸಂಹಿತಾ, ಆಪಸ್ತಂಬ ಧರ್ಮಸೂತ್ರಗಳು, ಆಪಸ್ತಂಬೋಪನಿಷತ್, ಆಪಸ್ತಂಬಸ್ಮೃತಿಗಳು ಆಗಿನಿಂದ ಈಗಿನವರೆಗೂ ಎಲ್ಲಾ ವರ್ಗದ ಜನರಿಗೆ ಉಪಕಾರವಾಗಿ, ಪ್ರಮಾಣ ಗ್ರಂಥ ಪಾಮರರ ಉದ್ಧಾರಕ್ಕೆ ಮಾರ್ಗದರ್ಶನ ನೀಡುವ ಶ್ರೇಷ್ಠ ಗ್ರಂಥಗಳಾಗಿ ನಿಂತಿವೆ. ಕಶ್ಯಪ ಮಹರ್ಷಿ ಆಪಸ್ತಂಬರನ್ನು ಕಂಡರೆ ಅಪಾರ ಗೌರವವನ್ನು ನೀಡುತ್ತಿದ್ದರು. ಹೀಗೆ ಸಾಂಗವಾಗಿ ತಪೋವನದಲ್ಲಿ ಯಜ್ಞ ಯಾಗಾದಿಗಳು ಪ್ರವಚನಗಳು ನಡೆಯುತ್ತಿರಲು ಆಪಸ್ತಂಬರು ಜನ ಜಂಗುಳಿಯಿಂದ ದೂರವಾಗಿ ಏಕಾಂತದಲ್ಲಿ ಪರಮಾತ್ಮನ ಚಿಂತನೆ, ಧ್ಯಾನವನ್ನು ಮಾಡಿಕೊಂಡು ಪರಮಾತ್ಮನ ಆತ್ಮ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ತಪಸ್ಸನ್ನು ಮಾಡಲು ಯಾರಿಗೂ ಹೇಳದೆ ಒಂದು ದಿನ ರಾತ್ರಿ ತಪೋವನವನ್ನು ಬಿಟ್ಟು ದೂರವಾಗಿ ನಡೆದರು. ನರ್ಮದಾ ಹಾಗೂ ಮಚ್ಛಾನದಿಗಳ ಕೂಡುವ ಸಂಗಮದಲ್ಲಿ ಜಲಸ್ತಂಬವನ್ನೂ ಯೋಗಸಾಧನೆಗಳನ್ನು ಬಲ್ಲ ಇವರು ನೀರಿನಲ್ಲಿ ಮುಳುಗಿ ತಪಸ್ಸನ್ನು ಆಚರಿಸಲು ಪ್ರಾರಂಭಿಸಿದರು. ಹೀಗೆ ಹಲವು ದಿನಗಳು ಶ್ರೀಮನ್ನಾರಾಯಣನ ಅಷ್ಟಾಕ್ಷರಿ ಮಂತ್ರವನ್ನು ಜಪಿಸುತ್ತಾ ನಾರಾಯಣನ ಧ್ಯಾನದಲ್ಲಿ ನಿರತರಾದರು. ಜನ್ಮೌಷಧಿ -- ಮಂತ್ರ ತಪಸ್ಸಮಾಧಿಜಾಃ ಸಿದ್ಧಯಃ" ಎಂಬಂತೆ. ಪರಮಾತ್ಮನ ಧ್ಯಾನದಲ್ಲಿ ಅವನ ಭಕ್ತಿಸಾಗರದಲ್ಲಿ ಮುಳುಗಿ ಹೋದರು. ಸಮಸ್ತ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ ವಿಶ್ವವ್ಯಾಪಕನೂ, ವಿಶ್ವಾತ್ಮನೂ, ಸರ್ವಾಂತರ್ಯಾಮಿಯೂ ಆದ ನಾರಾಯಣನ ಧ್ಯಾನದಲ್ಲಿ ನಿರತನಾದ ಆಪಸ್ತಂಬರಿಗೆ ಶ್ರೀಮನ್ನಾರಾಯಣನು ಎಲ್ಲಾ ಚರಾಚರ ವಸ್ತುಗಳಲ್ಲಿ ವ್ಯಾಪಿಸಿದ್ದಾನೆ ಎಂಬ ಭಾವ ಬಲಿತು "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ" ಎಂಬ ವೇದದ ಅರ್ಥ ಮನಕ್ಕೆ ಬಂದಾಗ ಸಮಸ್ತ ಜೀವಿಗಳಿಗೂ ಅಂತರ್ಯಾಮಿಯಾಗಿ ಚರಾಚರಾತ್ಮಕವಾದ ಸಮಸ್ತ ಜಗತ್ತನ್ನೂ ಮನಗಂಡರು. "ಯತ್ತೇ ರೂಪಂ ಕಲ್ಯಾಣ ತಮಂ ತತ್ತೇ ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ" ಎಂಬ ಉಪನಿಷತ್ತಿನ ವಾಕ್ಯದ ಪ್ರಕಾರ ನಿರತಿಶಯ ಸುಂದರನೂ, ಕಲ್ಯಾಣತರನಾದ ಆನಂದದಾಯಕನಾದ ಶುಭಕರನಾದ ದಿವ್ಯಮಂಗಳ ರೂಪನು ತನ್ನಲ್ಲಿ ನೆಲೆಸಿದ್ದಾನೆ ಎಂದು ಭಾವಿಸಿ ತಪಸ್ಸನ್ನು ಆಚರಿಸುತ್ತಿದ್ದರು. ಆಪಸ್ತಂಬರು ಪರಮಾತ್ಮನನ್ನು ದೃಢವಾಗಿ ಏಕಾಗ್ರತೆಯಿಂದ ಪ್ರೀತಿಯಿಂದ ಧ್ಯಾನಿಸುತ್ತಾ ಹನ್ನೆರಡು ವರ್ಷಗಳು ಕಳೆದರು. ಅವರ ಅಪಾರ ತಪಸ್ಸಿನ ಪ್ರಭಾವದಿಂದ, ಪವಿತ್ರತೆಯಿಂದ ಆ ನರ್ಮದಾ ಸಂಗಮದಲ್ಲಿ ನೀರಿನಲ್ಲಿ ತಪಸ್ಸನ್ನು ಮಾಡುತ್ತಿದ್ದ ಆಪಸ್ತಂಬರ ಸುತ್ತಲೂ ಅಲ್ಲಿನ ಸಕಲ ಜಲಚರ ಪ್ರಾಣಿಗಳು ಅವರ ಅಂಗಸ್ಪರ್ಶಕ್ಕೆ ಹಾತೆರೆದು ನಲಿದಾಡುತ್ತಿದ್ದವು. ಕೆಲವು ಮೀನುಗಳು, ಮೊಸಳೆಗಳು, ಕಪ್ಪೆಗಳು, ಆಮೆಗಳು ಗುಂಪುಗುಂಪಾಗಿ ಮಹರ್ಷಿಯ ಮೈಯನ್ನು ನೆಕ್ಕುತ್ತಾ ಪ್ರದಕ್ಷಿಣೆ ಮಾಡುತ್ತಾ ತಮ್ಮ ಆಟಗಳಲ್ಲಿ ಮಗ್ನವಾಗಿದ್ದವು. ನರ್ಮದಾ ನದಿಯಲ್ಲಿ ಮೀನುಗಳ ಕಡಿಮೆಯಾದದ್ದನ್ನು ಗಮನಿಸಿದ ಮೀನುಗಾರರು, ಸಂಗಮದತ್ತ ಬಂದು ಮೀನುಗಳಿಗಾಗಿ ಬಲೆಯನ್ನು ಬೀಸಲು, ಮೀನುಗಳ ಜೊತೆಯಲ್ಲಿ ಆಪಸ್ತಂಭರೂ ಸಿಕ್ಕಿ ಮೀನುಗಾರರ ಬಲೆಯಲ್ಲಿ ಭಾರವಾದ ವಸ್ತುವಾಗಿ ನೀರಿನಿಂದ ಹೊರಬಂದರು. ಋಷಿಗಳನ್ನು ಕಂಡ ಮೀನುಗಾರರು ತಮ್ಮ ತಪ್ಪನ್ನು ಮನ್ನಿಸಬೇಕೆಂದು ಅವರ ಪಾದಕಮಲಗಳಲ್ಲಿ ನಮಸ್ಕರಿಸಿ ಬೇಡಿಕೊಂಡರು. ಆಗ ಮಹರ್ಷಿಗಳು "ಎಲೈ ಮೀನುಗಾರರೆ, ನೀವು ಯಾವ ತಪ್ಪೂ ಮಾಡಿಲ್ಲ, ನೀವು ನಿಮ್ಮ ಕುಲಧರ್ಮಕ್ಕೆ ಅನುಗುಣವಾಗಿ ಮೀನಿಗಾಗಿ ಬಲೆ ಬೀಸಿದಿರಿ. ಮೀನುಗಳಾದರೆ ಹಲವು ವರ್ಷಗಳಿಂದ ನಾನು ತಪಸ್ಸನ್ನು ಮಾಡುತ್ತಿರಲು ಅವುಗಳು ನನ್ನ ಸಹವಾಸದಲ್ಲಿ ಸುಖವನ್ನು ಆನಂದವನ್ನು ಪಡೆಯುತ್ತಿದ್ದವು. ಅವುಗಳನ್ನು ರಕ್ಷಿಸುವುದು ನನ್ನ ಧರ್ಮ. ತಾವು ದಯವಿಟ್ಟು ಆ ಮೀನುಗಳನ್ನು ಬಯ್ಯುವೇಡಿ. ಅವುಗಳು ಸ್ವತಂತ್ರವಾಗಿ ಈ ನದಿಯಲ್ಲೇ ವಿಹರಿಸಲಿ" ಎಂಬುವುದಾಗಿ ತಿಳಿಸಲು, ಮೀನುಗಾರರು ತಮ್ಮ ಸ್ಥಳಕ್ಕೆ ಹಿಂತಿರುಗಿದರು.

ಮೀನುಗಾರರ ಬಲೆಯಲ್ಲಿ ಋಷಿಯೋರ್ವನು ಸಿಕ್ಕಿದ ವಿಷಯ ಆ ದೇಶದ ರಾಜ ನಾಭಾಗ ಮಹಾರಾಜನಿಗೆ ತಿಳಿಯಿತು. ಅದನ್ನು ಕೇಳಿದ ತಕ್ಷಣ ರಾಜನು ನರ್ಮದಾ ಸಂಗಮಕ್ಕೆ ಬಂದು ಬಲೆಯಲ್ಲಿ ಹಾಗೆಯೇ ಕುಳಿತು ತಪಸ್ಸನ್ನು ಮಾಡುತ್ತಿದ್ದ ಆಪಸ್ತಂಬ ಋಷಿಗಳ ಅಡಿದಾವರೆಗಳಿಗೆ ನಮಸ್ಕರಿಸಿ "ಸ್ವಾಮಿ, ನಾನು ನಿಮ್ಮ ಶಿಷ್ಯ. ತಾವು ಅರಮನೆಗೆ ಬಂದು ನಮ್ಮಗಳ ಗುರುಗಳಾಗಿ ಆತಿಥ್ಯವನ್ನು ಸ್ವೀಕರಿಸಿ, ನಮ್ಮನ್ನು ಉದ್ಧಾರ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ರಾಜರ ಮಾತಿನಂತೆ ಆಪಸ್ತಂಬರು ಅರಮನೆಗೆ ಹೊರಟರು. ಆಪಸ್ತಂಬರ ಇಚ್ಛೆಯಂತೆ

# ತಿ. ತಿ. ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) --ವಿ. ಬಾದರಾಯಣ ಮೂರ್ತಿ 12--50

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) --ಬನ್ನಂಜೆ ಗೋವಿಂದಾಚಾರ್ಯ 7--00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 3--75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 2--25

ಸ್ತೋತ್ರ ಕುಸುಮಮಾಲಾ --ಸಂ. ವೆಂಕಟಾಚಲ 3--00

ಆಚಾರಗಳು ಆಡಂಬರಗಳು --ಕೆ. ಚಂದ್ರಮೌಳಿ 0--40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೨--50

" " (ಕನ್ನಡ ಲಿಪಿಯಲ್ಲಿ) 0--12

### ಮಕ್ಕಳಿಗಾಗಿ :

ಶ್ರೀಪಾದರಾಜರು --ಎಂ. ಎಸ್. ಗುಂಡೂರಾವ್ 0--75

ಮಹಿಪತಿದಾಸರು --ಶಾನಭಾಗ 0--85

ಪ್ರಸನ್ನ ವೆಂಕಟ ದಾಸರು --ವಿ. ಬಾದರಾಯಣಮೂರ್ತಿ 0--80

ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ --ಡಾ. ಎಂ. ಸಂಗಮೇಶಂ 0--20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11--00

ತೀರ್ಥರಾಜ ತಿರುಪತಿ --ಡಾ. ಎಂ. ಸಂಗಮೇಶಂ 1--50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0--12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62

ಕಠೋಪನಿಷತ್ --ಡಾ. ಕೆ. ಸಿ. ವರದಾಚಾರಿ ಹಾಗೂ --ಡಾ. ಡಿ. ತಾತಾಚಾರ್ಯ 15--00

ಮಾರ್ಕಂಡೇಯ ಸಂಹಿತಾ 18--00

ತತ್ತ್ವಸಂಖ್ಯಾನಂ -- ಆರ್. ರಾಮಮೂರ್ತಿ ಶರ್ಮಾ 2--00

ಬ್ರಹ್ಮಸೂತ್ರ ಭಾಷ್ಯ (ಭಾಗ--೧) -- ಆರ್. ರಾಮಮೂರ್ತಿ ಶರ್ಮಾ 30--00

ಅಲಂಕಾರ ಸಂಗ್ರಹ -- ಸಂ--ಕೆ. ಭಾಸ್ಕರರಾವ್ 16--00

ಸೀತಾರಾಮಾಂಜನೇಯಂ --ಡಾ. ಡಿ. ಅರ್ಕಸೋಮಯಾಜಿ 50--00

ಪ್ರಶ್ನೋಪನಿಷತ್ 11--00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ --ಸಂ--ಡಾ. ಎಸ್. ಬಿ. ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ.ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂ.ಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,**

ತಿ. ತಿ. ದೇ. ತಿರುಪತಿ.

ರಾಜನು ಮೀನುಗಾರರಿಗೆ ಯಥೇಚ್ಛವಾಗಿ ಹಣವನ್ನು ಕೊಟ್ಟನು.

## ಆಪಸ್ತಂಬರು ಕಶ್ಯಪ ಋಷಿಗಳು

ದಕ್ಷಬ್ರಹ್ಮನ ಮಗಳಾದ ದಿತಿ ಕಶ್ಯಪನನ್ನು ವರಿಸಿ ಹಿರಣ್ಯಕಶಿಪು, ಹಿರಣ್ಯಾಕ್ಷರನ್ನು ಹೆತ್ತ ತರುವಾಯ, ಸಮುದ್ರಮಥನ ಕಾಲದಲ್ಲಿ ತನ್ನ ಮಕ್ಕಳೆಲ್ಲಾ ಕೊಲ್ಲಲ್ಪಟ್ಟಿದ್ದನ್ನು ಕಂಡ ಆಕೆ ದೇವೇಂದ್ರನನ್ನು ಮೀರಿಸುವಂತಹ ಮಕ್ಕಳನ್ನು ಪಡೆಯಬೇಕೆಂಬ ಆಸೆಯನ್ನು ತಿಳಿಸಿದಳು. ಕಶ್ಯಪರು ತನ್ನ ಹೆಂಡತಿಯ ಆಸೆಯಂತೆ ಇಂದ್ರನನ್ನು ಜಯಿಸುವಂತಹ ಬಲಿಷ್ಠನಾದ ಮಕ್ಕಳನ್ನು ಪಡೆಯಲು - ಪುತ್ರಕಾಮೇಷ್ಟಿ ಯಾಗವನ್ನು ಮಾಡಲು ನಿರ್ಧರಿಸಿ ಅದಕ್ಕೆ ಸಮರ್ಥರೂ ಯೋಗ್ಯರೂ ಆದ ಆಪಸ್ತಂಬರನ್ನು ಗುರುತಿಸಿ ಯಾಗವನ್ನು ಸಾಂಗವಾಗಿ ನೆರವೇರಿಸದೇಕೆಂದು ಪ್ರಾರ್ಥಿಸಿಕೊಂಡರು. ಕಶ್ಯಪರ ಮಾತಿನಂತೆ ಆಪಸ್ತಂಬರು ಯಾಗಮಂಟಪವನ್ನು ಸಿದ್ಧಗೊಳಿಸಿ ತಾವೇ ಬ್ರಹ್ಮನಾಗಿ ಪುತ್ರಕಾಮೇಷ್ಟಿ ಯಾಗವನ್ನು ಪೂರ್ಣಗೊಳಿಸಿದರು. ಆಪಸ್ತಂಬರ ಆಶೀರ್ವಾದವಿಂದ ಕಶ್ಯಪರ ಅನುಗ್ರಹದಿಂದ ದಿತಿಯು ಗರ್ಭವತಿಯಾದಳು. ಈ ವಿಷಯವನ್ನು ಅರಿತ ಇಂದ್ರ, ದಿತಿಯು ಒಂದು ಹಗಲಿನಲ್ಲಿ ನಿದ್ದೆ ಮಾಡುತ್ತಿರಲು ಆಕೆಯ ಗರ್ಭವನ್ನು ಏಳು ಭಾಗವಾಗಿ ಕತ್ತರಿಸಿದ. ಆಗ ಆ ಗರ್ಭ ಅಳತೊಡಗಿತು. ದಿತಿಯು ಎಚ್ಚೆತ್ತು ತನಗೆ ಶಾಪಕೊಟ್ಟಾಳು ಎಂಬ ಭಯದಿಂದ ಅಳುತ್ತಿದ್ದ ಆ ಗರ್ಭವನ್ನು ಮಾರುದ -- ಅಳಬೇಡ -- ಎಂಬುವುದಾಗಿ ಹೇಳಿದನು. ಅಳುವಿನ ಧ್ವನಿಯನ್ನು ಕೇಳಿದ ದಿತಿ ಎಚ್ಚತ್ತಾಗ ಇಂದ್ರನು ತನ್ನ ಕೃತ್ಯಕಕಾಗಿ ಮರುಗಿ ಆಪಸ್ತಂಬರ ಯಾಗವು ನಿಷ್ಫಲವಾಗಬಾರದೆಂದು ಗೌರವಿಸಿ ಆ ಏಳು ತುಂಡುಗಳಿಗೆ ದೈವತ್ವವನ್ನು ನೀಡಿ ಮರುತ್ತುಗಳೆಂದು ನಾಮಕರಣಮಾಡಿದನು. ಆಪಸ್ತಂಬರು ಹಲವು ಕಾಲ ರಾಜನಾದ ನಾಭಾಗನ ಅರಮನೆಯಲ್ಲಿ ನೆಲೆಸಿ ಹಲವು ಧರ್ಮಸೂತ್ರಗಳನ್ನು ರಚಿಸಿ ಜ್ಞಾನ ದಾನವನ್ನು ಹಲವರಿಗೆ ನೀಡಿದರು -- ಅನಂತರ ತನ್ನ ಆಶ್ರಮಕ್ಕೆ ಹಿಂತಿರುಗಿ ಹೆಂಡತಿ ಮಕ್ಕಳ ಜೊತೆ ಆಶ್ರಮದಲ್ಲಿ ಋಷಿಗಳಿಗೆ ಪಾಠ ಪ್ರವಚನಗಳನ್ನು ನೀಡುತ್ತಾ ಹಲವು ವರ್ಷಗಳು ಜೀವಿಸಿದ್ದರು. ಆಪಸ್ತಂಬರು ಕೃಷ್ಣ ಯಜುರ್ವೇದಕ್ಕೆ ನೀಡಿದ ಕಾಣಿಕೆ ಬಹಳ ಅಮೂಲ್ಯವಾದುದು. ಆಚಂದ್ರಾರ್ಕವಾದುದು.

## ಆಪಸ್ತಂಬ ಸಂಹಿತೆ

ವಿಶ್ವದ ಬೇರೆ ಭಾಗಗಳಲ್ಲಿ ನಾಗರೀಕತೆ ತಲೆಯೆತ್ತುವ ಮುಂಚೆಯೇ ಭರತ ಖಂಡದಲ್ಲಿ ವೇದ ವಾಙ್ಮಯ ಭಾರತೀಯರಿಗೆ ಆದರ್ಶ ಜೀವನದ ಮೌಲ್ಯಗಳನ್ನು ಉದಾತ್ತ ಮನೋಧರ್ಮ, ಸದ್ವರ್ತನೆಗಳನ್ನು ಅಪಾರವಾದ ಆದರ್ಶಗಳನ್ನು ನೀಡಿದವು. ಈ ವೇದ ವಾಙ್ಮಯ -- ಸಂಹಿತೆ, ಬ್ರಾಹ್ಮಣ, ಆರಣ್ಯಕ, ಮತ್ತು ಉಪನಿಷತ್ತುಗಳೆಂಬ ಬೇರೆ ಬೇರೆ ವಿಭಾಗಗಳಲ್ಲಿ ಅಪಾರವಾದ ಜ್ಞಾನಭಂಡಾರವಾಗಿ ಪ್ರಜ್ವಲಿಸುತ್ತಿವೆ. ವೇದ ಶಬ್ದಕ್ಕೆ ತಿಳಿ ಎಂಬುವುದಾಗಿ ಅರ್ಥ ವಿದ್ ಧಾತುವಿನ ಪದಾರ್ಥ. ವೇದಗಳ ಮುಖ್ಯ ಗುರಿ ಅನಿಷ್ಟನಿವಾರಣೆ ಇಷ್ಟಪ್ರಾಪ್ತಿ, ಪರಮಾತ್ಮನ ಸ್ವರೂಪವನ್ನು ಅರಿಯುವುದೇ ಇದರ ಗುರಿ. ನಮ್ಮ ಹಿಂದಿನ ಮಹರ್ಷಿಗಳು ತಮ್ಮ ತಪಶ್ಶಕ್ತಿಯಿಂದ ಯಾವುದು ಮಾನವ ಕೋಟಿಗೆ, ಹಿತವು ಎಂಬುವುದನ್ನು ತಮ್ಮ ಮನೋಬಲದಿಂದ ಅರಿತು ಪ್ರಕಟಿಸಿದ ಮಂತ್ರಗಳೇ ವೇದಗಳು. ಅವು ನಿತ್ಯವಾದವು. ಅಪೌರುಷೇಯವಾದವು. ಮುಂಚೆ ವೇದ ಒಂದೇ ಆಗಿದ್ದು. ವ್ಯಾಸ ಮಹರ್ಷಿಗಳು ಯಾಗದಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮ ಎಂಬ ಋತ್ವಿಕ್ಕುಗಳು ಉಪಯೋಗಿಸುವ ಮಂತ್ರ ವಿಭಾಗಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳೆಂದು ಬೇರೆ ಬೇರೆಯಾಗಿ ವಿಂಗಡಿಸಿದರು.

ಇದನ್ನೇ ಆಪಸ್ತಂಬರು ವೇದವಿಭಾಗವನ್ನು ಕುರಿತು --

"ಋಗ್ವೇದೇನ ಹೋತಾ ಕರೋತಿ
ಯಜುರ್ವೇದೇನಾ ಧ್ವರ್ಯುಃ
ಸಾಮ ವೇದೇನೋದ್ಗಾತಾ
ಸರ್ವೈಃ ಬ್ರಹ್ಮಾ"

ಎಂಬುದಾಗಿ ತಿಳಿಸಿದ್ದಾರೆ. ಹಲವು ಋಷಿಗಳಿಂದ ಹೇಳಲ್ಪಟ್ಟ ಮಂತ್ರಗಳನ್ನು ಒಂದೇ ಕಡೆ ಕೂಡಿಸಿ ಹೇಳುವುದೇ ಸಂಹಿತೆ. ಋಗ್ವೇದ ಸಂಹಿತೆಯಲ್ಲಿ ೧೦೫೫೨ ಮಂತ್ರಗಳಿದ್ದರೆ, ಶುಕ್ಲ ಯಜುರ್ವೇದದಲ್ಲಿ ೪೦ ಅಧ್ಯಾಯಗಳು --೩೦೩ ಅನುವಾಕಗಳು, ೧೯೭೫ ಮಂತ್ರಗಳಿದ್ದರೆ, ಕೃಷ್ಣ ಯಜುರ್ವೇದದಲ್ಲಿ ೬೫೧ ಅನುವಾಕಗಳು, ೧೧೦೨೯೬ ಪದಗಳಿವೆ. ಕೃಷ್ಣ ಯಜುರ್ವೇದ ಸಂಹಿತೆ ಗದ್ಯ ಪದ್ಯ ಮಿಶ್ರಿತಗೊಂಡಿವೆ. ಒಂದೊಂದು ವೇದಕ್ಕೂ ಹಲವು ಶಾಖೆಗಳಿವೆ. ಹಾಗೆಯೇ ಕೃಷ್ಣಯಜುರ್ವೇದಕ್ಕೆ ಕಠ, ಕಪಿಷ್ಠಳ, ಕಾಲಾಪ ಅಥವಾ ಮೈತ್ರಾಯಣೀಯ ಹಾಗೂ ತೈತ್ತಿರೀಯ ಎಂಬ ಶಾಖೆಗಳು. ತೈತ್ತರೀಯ ಶಾಖೆಗೆ ಸಂಬಂಧಿಸಿದ ತೈತ್ತರೀಯ ಸಂಹಿತವನ್ನೇ "ಆಪಸ್ತಂಬ ಸಂಹಿತ" ಎಂಬುವುದಾಗಿ ಹೇಳುತ್ತಾರೆ. ಕಾರಣ ಈ ತೈತ್ತಿರೀಯ ಸಂಹಿತೆಯನ್ನು ವಿಭಾಗಿಸಿ ಪ್ರಚಾರಕ್ಕೆ ತಂದ ಕೀರ್ತಿ ಆಪಸ್ತಂಬರಿಗೆ ಸೇರುತ್ತವೆ.

ಈ ಸಂಹಿತದಲ್ಲಿ ೭ ಕಾಂಡಗಳು ೪೪ ಪ್ರಪಾಠಗಳು, ೬೫೧ ಅನುವಾಕಗಳು ಇವೆ. ತೈತ್ತಿರೀಯ ಸಂಹಿತೆಗೆ ಭಟ್ಟ ಭಾಸ್ಕರರು, ಸಾಯಣಾಚಾರ್ಯರು. ಭಾಷ್ಯಗಳನ್ನು ಬರೆದಿದ್ದಾರೆ. ಇವರಲ್ಲಿ ವಾಜಪೇಯಯಾಗ, ರಾಜಸೂಯ ಯಾಗಗಳ ಸುಂದರ ವರ್ಣನೆಗಳು ಇವೆ. ದಕ್ಷಿಣ ಭಾರತದಲ್ಲಿ ಇದರ ಪ್ರಚಾರ ಅಪಾರ. ತೈತ್ತಿರೀಯ ಸಂಹಿತೆಯ ಮೊದಲನೆಯ ಮಂತ್ರ ಆಪಸ್ತಂಬರು ವಿಧಿವತ್ತಾಗಿ ಹೇಳುವಾಗ ---

ಇಷೇತ್ವೋರ್ಜೇತ್ವಾವಾಯವಸ್ಥೋ
ಪಾಯವಸ್ಥದೇವೋವಸ್ಸವಿತಾ
ಪ್ರಾರ್ಪ್ಯಯತು ಶ್ರೇಷ್ಠ ತಮಾಯ
ಕರ್ಮಣೇ ಹರಿಃ ಓಂ ಹರಿಃ ಓಂ

ಈ ಮಂತ್ರವು ದರ್ಶಯಾಗವನ್ನು ಮಾಡುವ ಮುನ್ನ ಯಜಮಾನನ ನಿಮಿತ್ತ ಅಧ್ವರ್ಯು ಅಮಾವಾಸ್ಯೆ ಬೆಳಗಿನ ಜಾವ ಸಮಿದಾಧಾನರೂಪ ಕರ್ಮವನ್ನು ಮಾಡಿದ ತರುವಾಯ ಈ ಮಂತ್ರದಿಂದ ಫಲಾಶ ವೃಕ್ಷವನ್ನು ಕತ್ತರಿಸಿ ಸಮಿತ್ತನ್ನು ಆರಿಸಿಕೊಳ್ಳಬೇಕು. ಈ ಮಂತ್ರದ ಅರ್ಥ -- ಓ ಫಲಾಶವೃಕ್ಷವೇ ದೇವತೆಗಳಿಗೆ ದಧಿರೂಪವಾದ ಅನ್ನಕ್ಕಾಗಿ ನಿನ್ನನ್ನು ಕತ್ತರಿಸುತ್ತಿದ್ದೇನೆ. ದೇವತೆಗಳಿಗೆ ಬಲಪ್ರದವಾದ ರಸಕ್ಕಾಗಿ ನಿನ್ನನ್ನು ಶುಭ್ರಮಾಡುತ್ತಿದ್ದೇನೆ. ಓ ಎತ್ತುಗಳೇ ನೀವು ನಿಮ್ಮ ತಾಯಿಯವರನ್ನು ತೊರೆದು ಆಹಾರಕ್ಕಾಗಿ ವನಕ್ಕೆ ಹೊರಟು ಸಾಯಂಕಾಲ ಹಿಂತಿರುಗಿರಿ -- ಎಂಬುವುದಾಗಿ ಪಲಾಶ ಕೊಂಬಿನಿಂದ ಗೋವುಗಳಿಂದ ಎತ್ತುಗಳನ್ನು ಬೇರ್ಪಡಿಸಿದನು. ಓ ಹಸುಗಳೇ ಪ್ರೇರಕನಾದ ಪರಮೇಶ್ವರನು ಅತ್ಯಂತ ಶ್ರೇಷ್ಠನಾದ ಕರ್ಮ ನಿಮಿತ್ತ ನಿಮ್ಮನ್ನು ಅರಣ್ಯಕ್ಕೆ ಆಹಾರಕ್ಕಾಗಿ ಹೋಗಲು ಪ್ರೇರೇಪಿಸಿರುವಾಗ ಹೋಗಿಬನ್ನಿ ಎಂಬುವುದಾಗಿ ಅರ್ಥ. ಮುಂದಿನ ಮಂತ್ರಗಳಲ್ಲಿ ಗೋವುಗಳಿಗೆ ಯಜಮಾನನಿಗೆ ಯಾವ ಅಪಾಯ ಬಾರದಿರಲಿ ಎಂಬುವುದಾಗಿ ಪ್ರಾರ್ಥನಾ ಮಂತ್ರಗಳು.

ಕೃಷ್ಣಯಜುರ್ವೇದವು ವೇದದ ಉಗಮವನ್ನು ಕುರಿತು--

ಯಾ ಮೃಷಯೋ ಮಂತ್ರಕೃತೋ ಮನೀಷಿಣಃ
ಅನ್ವೈಚ್ಛನ್ ದೇವಾಸ್ತಪಸಾ ಶ್ರಮೇಣ

ಮಹರ್ಷಿಗಳು ತಮ್ಮ ಮನೋವ್ಯಾಪಾರಗಳನ್ನು ತ್ಯಜಿಸಿ ಶುದ್ಧ ಮನಸ್ಕರಾಗಿ ಸಮಾಧಿ ಸ್ಥಿತಿಯಲ್ಲಿ ಇರುವಾಗ ತಮ್ಮ ತಪಶ್ಶಕ್ತಿಯಿಂದ ವೇದಗಳನ್ನು ದರ್ಶನಮಾಡಿದರು. ಅವರು ಮಂತ್ರ ದ್ರಷ್ಟಾರರಾದರು (ಋಷಿಃ ದರ್ಶನಾತ್). ಯಜುರ್ವೇದಕ್ಕೆ ನೂರು ಶಾಖೆಗಳು. ಗುರುವಿನ ಆಜ್ಞೆಯಂತೆ ಕಲಿತ ವೇದ

ಗಳನ್ನು ಯಾಜ್ಞವಲ್ಕ್ಯ ಮಹರ್ಷಿ ವಾಂತಿ ಮಾಡಿದಾಗ ವೈಶಂಪಾಯರ ಶಿಷ್ಯರು ತಿತ್ತಿರಿ ಪಕ್ಷಿಗಳ ರೂಪದಿಂದ ಇವುಗಳನ್ನು ಸ್ವೀಕರಿಸಿದ್ದಕ್ಕೆ ಕೃಷ್ಣಯಜುರ್ವೇದ ಅಥವಾ ತೈತ್ತಿರೀಯಶಾಖೆ ಎಂಬುವುದಾಗಿ ಹೆಸರು ಬಂತು.

ತೈತ್ತಿರೀಯ ಸಂಹಿತೆಯಲ್ಲಿ ಪ್ರಜಾಪತಿ ಋಷಿ ೨೨೦ ಮಂತ್ರಗಳನ್ನು, ಗೌತಮರು ೮೦ ಮಂತ್ರಗಳನ್ನು, ದೀರ್ಘತಮರು ೬೭ ಮಂತ್ರಗಳನ್ನೂ, ಪರಮೇಷ್ಠಿ ೬೦ ಮಂತ್ರಗಳನ್ನೂ, ಆತ್ರೇಯ ೫೭ ಮಂತ್ರಗಳನ್ನು ದರ್ಶನಪಡೆದರು. ವಾಮದೇವ, ವಸಿಷ್ಠ, ಮೇದಾತಿಥಿ, ಮಧುಚ್ಛಂದ, ನಾರಾಯಣ, ಕುತ್ಸ, ವಿಶ್ವಾಮಿತ್ರ, ವರುಣ, ಆಂಗೀರಸ, ಶುನಶ್ಶೇಪ, ಅಗಸ್ತ್ಯ ಜಮದಗ್ನಿ ಮತ್ತು ಭರದ್ವಾಜರು ಕ್ರಮವಾಗಿ ೫೭, ೫೩, ೪೭, ೪೭, ೪೫, ೪೩, ೩೩, ೩೦, ೨೯, ೨೪, ೧೯, ೧೯, ಮತ್ತು ೧೮ ಮಂತ್ರಗಳ ದ್ರಷ್ಟಾರರಾದರು. ಕೃಷ್ಣಯಜುಸ್ಸಂಹಿತೆಯ ೪೦ ಅಧ್ಯಾಯಗಳ ಪೈಕಿ ೩೧ ಅಧ್ಯಾಯಗಳಲ್ಲಿ ಅಗ್ನಿದೇವತೆಯ ಪ್ರಸ್ತಾಪ, ಆತನ ಮಹಿಮಾ ಮಂತ್ರಗಳಿವೆ. ತೈತ್ತಿರೀಯ ಸಂಹಿತೆ ಪ್ರಥಮಕಾಂಡ ಪ್ರಥಮ ಅನುವಾಕದ ಪ್ರಕಾರ ಅಪಸ್ತಂಬರ ಮತ ಅನುಸರಿಸಿ--

ಯಜ್ಞಸ್ಯ ಘೋಷದಸಿ, ಪ್ರತ್ಯುಷ್ಟಂ ರಕ್ಷಃ
ಪ್ರತ್ಯುಷ್ಟಾ ಅರಾತಯಃ ಪ್ರೇಯ
ಮಗಾದ್ಧಿಷಣಾ ಬರ್ಹಿರಚ್ಚಮನು

ಓ ಅಗ್ನಿಯೇ ನೀನು ಯಜ್ಞಕ್ಕೆ ಸಾಧನದ್ರವ್ಯವಾಗಿದ್ದೀ. ರಾಕ್ಷಸರನ್ನೂ ಶತ್ರುಗಳನ್ನು ದಹಿಸುವನಾಗಿರುತ್ತೀ, ಇತ್ಯಾದಿ. ಮುಂದಿನ ಹಲವಾರು ಮಂತ್ರಗಳಲ್ಲಿ ಅಗ್ನಿಯನ್ನು ಧರ್ಮ ರಕ್ಷಕನೆಂದೂ, ಸತ್ಯ ವ್ರತನೆಂದೂ, ಈತನು ಸರ್ವಜ್ಞನು, ಸಮಸ್ತವನ್ನೂ ಅರಿತವನು ಎಂದೂ ಹೇಳಲಾಗಿದೆ.

ವಿಜ್ಞಾನ ಸ್ವರೂಪನಾದ ಅಗ್ನಿ ತನ್ನನ್ನು ಆರಾಧಿಸುವವರನ್ನು ಜ್ಞಾನ ಬಲ ಐಶ್ವರ್ಯಗಳನ್ನು ನೀಡಿ ಪೋಷಿಸುತ್ತಾನೆ ಎಂಬುವುದಾಗಿ ಆಪಸ್ತಂಬರು ತಿಳಿಸಿದ್ದಾರೆ. ವೇದಗಳನ್ನು ರಕ್ಷಿಸಿ ಮಾನವರ ಭಯಕ್ಲೇಶಾದಿಗಳನ್ನು ನಿವಾರಿಸಿ ಅವರನ್ನು ಧರ್ಮ ಪ್ರವರ್ತಕರನ್ನಾಗಿ ಮಾಡುವವನು ಅಗ್ನಿದೇವ. ಪ್ರಥಮ ಕಾಂಡ ಆನೇ ಅನುವಾಕ್ಯದಲ್ಲಿ ಅಗ್ನಿಯು ದೇಶೆಯವರಿಗೆ ದ್ರೋಹ ಮಾಡಿದವರನ್ನು ಶಿಕ್ಷಿಸಿ ಜಗತ್ತಿನ ಪಾಲಕನಾಗಿದ್ದಾನೆ ಎಂಬುವುದಾಗಿಯೂ ಅಗ್ನಿಯೇ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನೆಂದೂ ಮನಸ್ಸಿನ ಅಂತಶ್ಶತ್ರುಗಳನ್ನು ಜಯಿಸಿ ದಿವ್ಯಜ್ಞಾನವನ್ನು ನೀಡುವವನು ಇವನೇ ಎನ್ನಲಾಗಿದೆ. ಪ್ರಪಂಚದಲ್ಲಿ ದಿವ್ಯ ಜ್ಯೋತಿಯನ್ನು ನೀಡಿ ಅಂಧಃಕಾರವನ್ನು ನೀಡುವವನು ಅಗ್ನಿಯೇ.

ತೈತ್ತಿರೀಯ ತೃತೀಯ ಕಾಂಡದಲ್ಲಿ--

ಪ್ರಸೋ ಅಗ್ನೇ ತವೋರಿಭಿಃ
ಸುವಿರಾಭಿ ಸ್ತರತಿ ವಾಜ ಕರ್ಮಭಿಃ
ಯಸ್ಯ ತ್ವಂ ಸಖ್ಯ ಮಾವಿಥ

ಎಂಬುವುದರ ಅರ್ಥವನ್ನು ಆಪಸ್ತಂಬರು ಅಗ್ನಿಯ ಆರಾಧನೆಯಿಂದ ಯಜಮಾನನು ಸಂಸಾರಕ್ಲೇಶದಿಂದ ಪಾರಾಗಿ ಅವನ ಕೃಪೆಯಿಂದ ಸುವೀರಾಭಿಃ (ಶೋಭನ ಪುತ್ರಾದ್ಯ ಪತ್ಯಗಳನ್ನು ಹೊಂದುತ್ತಾನೆ. ಅನ್ನ ಅಹಾರಾದಿಗಳನ್ನು ಹೊಂದುತ್ತಾನೆ) ಎಂಬುವುದಾಗಿ ತಿಳಿಸುತ್ತಾರೆ. ಅಗ್ನಿಯು ಭೌತಿಕಾಗ್ನಿಯಾಗಿ ಪೃಥ್ವೀಪಾಲಕನಾಗಿ, ಜಠರಾಗ್ನಿಯಾಗಿ ಎಲ್ಲಾ ಜೀವರಾಶಿಗಳ ಪ್ರಾಣಹೇತುವಾಗಿ, ಜಲದಲ್ಲೂ (ಬಡಬಾಗ್ನಿ) ವಿದ್ಯುತ್ತಾಗಿ, ಸೂರ್ಯನಾಗಿ ಜಗತ್ ಪಾಲಕನಾಗಿ, ವಿದ್ವಾಂಸರಲ್ಲಿ ವಿವೇಕದಿಂದ ಪ್ರಾಕಾಶಿಸುತ್ತಾ, ಎಲ್ಲರ ಕರ್ಮಗುಣಗಳಿಗೆ ಸಾಕ್ಷೀಭೂತ

ನಾಗಿ ಲೋಕಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ನೀಡುವ ಭೂಮನಾಗಿ, ಈತನು ಅನ್ನವನ್ನು ಪಚನಮಾಡಿ, ಶುದ್ಧಿಮಾಡಿ, ಬಲವನ್ನೂ ವೀರ್ಯವನ್ನೂ ಕೊಡುವವನಾಗಿದ್ದಾನೆ. ಅಗ್ನಿಯನ್ನು ಉಪಾಸನೆ ಮಾಡುವವರು ಮನೋನಿಗ್ರಹವನ್ನು ಹೊಂದಿ, ಧನ--ಧಾನ್ಯ ಸಂಪತ್ತನ್ನು ಹೊಂದಿ ದೀರ್ಘಾಯಸ್ಸನ್ನು ಹೊಂದಿ ಉತ್ತಮ ಸುಖವನ್ನು ಹೊಂದುತ್ತಾರೆ. ಯಾಗ ಯಜ್ಞಗಳಲ್ಲಿ ಅಗ್ನಿಹೋತ್ರ ದ್ವಾರಾ ಹವಿರ್ಭಾಗವನ್ನು ಆಯಾ ದೇವತೆಗಳಿಗೆ ನೀಡಿ, ಅವರ ಅನುಗ್ರಹ ಪಡೆಯಬೇಕಾಗುತ್ತೆ. ಈ ಸಂಹಿತೆಯು ಪ್ರಾಜಾಪತ್ಯ, ಸೌಮ್ಯ ಆಗ್ನೇಯ, ವೈಶ್ವದೇವ, ಸ್ವಾಯಂಭುವ ಎಂಬುವ ಐದು ವಿಭಾಗಗಳಾಗಿವೆ.

## ಆಪಸ್ತಂಬ ಧರ್ಮಸೂತ್ರ

ಕೃಷ್ಣಯಜುರ್ವೇದಕ್ಕೆ ಸೇರಿದ ಆಪಸ್ತಂಬ ಕಲ್ಪ ಸೂತ್ರವು ೩೦ ಪ್ರಶ್ನಗಳಾಗಿ ವಿಭಾಗಗೊಂಡಿವೆ. ೨೮ ಮತ್ತು ೨೯ ಧರ್ಮಸೂತ್ರಗಳಾಗಿವೆ. ಆಪಸ್ತಂಬವು ತೈತ್ತಿರೀಯ ಶಾಖೆಯ ಖಾಂಡಿಕೀಯ ಉಪ ಶಾಖೆಯ ಐದು ವಿಭಾಗಗಳಲ್ಲೊಂದಾಗಿದೆ. ಆಪಸ್ತಂಬ ಧರ್ಮಸೂತ್ರಗಳಿಗೆ ಹರದತ್ತನ ವ್ಯಾಖ್ಯಾನ ಬಲು ಪ್ರಸಿದ್ಧವಾಗಿದೆ. ಆಪಸ್ತಂಬ ಧರ್ಮಸೂತ್ರಗಳನ್ನು ಶಬರ, ಕುಮಾರಿಲ, ಶಂಕರಾಚಾರ್ಯರು ಮತ್ತು ವಿಶ್ವರೂಪ ಹಾಗೂ ಮೇಧಾತಿಥಿಗಳು ಉದಹರಿಸಿದ್ದಾರೆ. ಹಿರಣ್ಯಕೇಶಿ ಧರ್ಮಸೂತ್ರಗಳಲ್ಲಿ ಆಪಸ್ತಂಬರ ಸೂತ್ರಗಳಿಂದ ಹಲವಾರು ಸೂತ್ರಗಳನ್ನು ಪದಶಃಭೆಟ್ಟಿ ಇಳಿಸಿರುವುದನ್ನು ನಾವು ಕಾಣಬಹುದು. ಕಪರ್ದಿಯು ಭಾಷ್ಯವನ್ನು ಬರೆದಿದ್ದಾರೆಂದು ಪ್ರತೀತಿ. ಧೂರ್ತಸ್ವಾಮಿಯೂ ಕೂಡ ಭಾಷ್ಯವನ್ನು ಬರೆದಿದ್ದಾರೆ.

ಅಪರಾರ್ಕ, ಹರದತ್ತ, ಸ್ಮೃತಿ ಚಂದಿಕೆಗಳಲ್ಲಿ ಆಪಸ್ತಂಬರ ಹಲವಾರು ಸೂತ್ರಗಳನ್ನು ಉದಹರಿಸಲಾಗಿದೆ. ಧರ್ಮ ಪರಿಪಾಲನೆ ಎಲ್ಲಾ ವರ್ಗದವರಿಗೂ ಪರಲೋಕ ಸುಖಸಾಧನ. ಇಹದಲ್ಲೂ ಕೂಡ ಸುಖ, ಶಾಂತಿ, ನೆಮ್ಮದಿಗಳನ್ನು ನೀಡುತ್ತದೆ. ಕಾರಣಾಂತರಗಳಿಂದ ವೇದಾಧ್ಯಯನ ಮಾಡಲು ಆಗದಿದ್ದರೆ ತನ್ನ ಶಾಖೆಯ ಮಂತ್ರಗಳನ್ನು ಬ್ರಹ್ಮಯಜ್ಞದಲ್ಲಿ ಪಠಿಸಬೇಕೆಂದು ಸಂಪ್ರದಾಯ. ಆಪಸ್ತಂಬರು ತಮ್ಮ ಧರ್ಮಸೂತ್ರದಲ್ಲಿ ಇದನ್ನೇ ಪ್ರತಿಪಾದಿಸಿದ್ದಾರೆ.

ವೇದಾಥರ್ವ ಪುರಾಣಾನಿ
ಸೇತಿಹಾಸಾನಿ ಶಕ್ತಿತಃ
ಬ್ರಹ್ಮಯಜ್ಞ ಪ್ರಸಿದ್ಧರ್ಥಂ
ವಿದ್ಯಾಂ ಚಾಧ್ಯಾತ್ಮಿಕೀಂ ಪಠೇತ್

ಆಪಸ್ತಂಬರ ಧರ್ಮಸೂತ್ರದಲ್ಲಿ ಆಚಾರ್ಯರ ಲಕ್ಷಣಗಳು, ಉಪನಯನ ಕಾಲ, ಬ್ರಹ್ಮಚಾರಿಯ ಧರ್ಮಗಳು, ಪಂಚಮಹಾಯಜ್ಞಗಳ ವಿಧಾನಫಲ ಬ್ರಾಹ್ಮಣಧರ್ಮ, ಮಹಾ ಪಾತಕಗಳು, ಪ್ರಾಯಶ್ಚಿತ್ತಗಳು, ಆಪದ್ಧರ್ಮಗಳು ಗೃಹಸ್ಥನ ಧರ್ಮಗಳು, ಭೋಜನ, ಉಪವಾಸ, ಸಂಭೋಗ ನಿಯಮಗಳು, ಅನ್ನಬಲಿ, ವೈಶ್ವದೇವ ಬಲಿ, ಗೃಹಸ್ಥನ ಕರ್ತವ್ಯಗಳು --ವಿಹಿತ ನಿಷಿದ್ಧಕರ್ಮಗಳು, ಅತಿಥಿ ಸತ್ಕಾರ, ಅವರ ಮಹಿಮೆ, ದಾನ ಅವರ ಮಹಿಮೆ, ಎಲ್ಲಾ ವರ್ಣಗಳವರ ಕರ್ಮಗಳು ಅವರ ಪ್ರಶಂಸೆ, ರಾಜಧರ್ಮ ಅಪರಾಧಗಳು, ಶಿಕ್ಷೆಗಳು, ವಿವಾಹಗಳು, ಅವರ ಬಗೆ, ವಿಧಿ, ಆಸ್ತಿಯ ವಿಭಜನೆ. ಜ್ಞಾತಿ ಅಜ್ಞಾತಿಗಳ ಮೃತಾಶೌಚ, ಶ್ರಾದ್ಧಗಳು. ಅವರ ವಿಧಿ ನಿಯಮಗಳು, ಗುಣವಂತರ ಪ್ರಸಂಸೆ, ಕೆಟ್ಟವರ ಖಂಡನೆ, ವ್ಯಭಿಚಾರಕ್ಕೆ ಶಿಕ್ಷೆ ಮುಂತಾದುವುಗಳನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಆಪಸ್ತಂಬ ಧರ್ಮಸೂತ್ರವು ಮುಖ್ಯವಾಗಿ ಗದ್ಯವಾಗಿದ್ದರೂ ಹಲವಾರು ಶ್ಲೋಕಗಳೂ ಇವೆ. ಆಪಸ್ತಂಬರು ಸಂಹಿತೆಗಳನ್ನು ಬ್ರಾಹ್ಮಣಗಳನ್ನು ತಮ್ಮ ಧರ್ಮ ಸೂತ್ರದಲ್ಲಿ ಉದಹರಿಸುತ್ತಾರೆ. ಒಂದು ಸಂದರ್ಭದಲ್ಲಿ ಆಚಾರವು ಅನುಮಾನಕ್ಕೆ ಆಸ್ಪದವಾದರೆ ಪ್ರಕೃಷ್ಟವಾಗಿ ಶೃತಿಯನ್ನು ಪರಿಪಾಲಿಸಬೇಕೆಂದು ಆಪಸ್ತಂಬರು "ಶ್ರುತಿರ್ಹಿ ಬಲೀಯಸ್ಯಾನು ಮಾನಿಕಾ ದಾಚಾರಾತ್ ವಿಪ್ರತಿಷೇದೇ ಶ್ರುತಿ ಲಕ್ಷಣಂ ಬಲೀಯಃ" ಎಂಬುವುದಾಗಿ ಅಭಿಪ್ರಾಯಪಟ್ಟಿದ್ದಾರೆ. ಆಪಸ್ತಂಬರು ಯಾವ ಸಂದರ್ಭದಲ್ಲಾಗಲಿ ಒಬ್ಬ ಮನುಷ್ಯನ ಪ್ರಯೋಜನಕ್ಕೆ ಬರುವಂತಹ ಕೆಲಸವನ್ನಾಗಲಿ, ಅಥವಾ ಅಂತಹ ಕಾರ್ಯದಿಂದ ಆತನಿಗೆ ಪ್ರೀತಿ ಆಗುವುದಾದರೆ ಶಾಸ್ತ್ರ ನಿಷಿದ್ಧವಿದ್ದರೂ ಮಾಡಬಹುದೆಂದು ಹೇಳುವಾಗ ಅವರು "ಯತ್ರತು ಪ್ರೀತ್ಯುಪಲಬ್ಧತಃ ಪ್ರವೃತ್ತಿರ್ನ ತತ್ರ ಶಾಸ್ತ್ರಮಸ್ತಿ" ಎಂಬುವುದಾಗಿ ಉದಾರ ಮನಸ್ಸಿನಿಂದ ಪ್ರೀತಿಗೆ ಪ್ರಯೋಜನಕ್ಕೆ ಹೆಚ್ಚಿಗೆ ಮಾನ್ಯತೆ ಕೊಟ್ಟಿದ್ದಾರೆ.

## ಆಪಸ್ತಂಬರ ಗೃಹ್ಯಸೂತ್ರ

ವೇದ ಕಾಲದಿಂದ ಇಮವರೆಗೂ ಆಚಾರ್ಯನಿಂದ ಶಿಷ್ಯನಿಗೆ ಕಂಠಸ್ಥ ಅಧ್ಯಯನ್ನು ನೀಡಿ ನಮ್ಮ ಸಂಪ್ರದಾಯಗಳನ್ನು ಸೂತ್ರಗಳ ಮುಖಾಂತರ ಕಾಪಾಡಿಕೊಂಡು ಬಂದಿದ್ದೇವೆ. ಸ್ಮೃತಿಗಳು ಸೂತ್ರಗಳು ಕೇವಲ ಆಧ್ಯಾತ್ಮಿಕ ಶಾಸ್ತ್ರ ಗ್ರಂಥಗಳಿಗಿಂತಲೂ ಅವುಗಳು ಮಾನವರ ಹಿತಕ್ಕಾಗಿ ಅವರ ವ್ಯವಹಾರದ ಹಾದಿ ಸುಗಮವಾಗಿ ನಡೆಯಲಿಕ್ಕಾಗಿ ಅವರ ದೈನಂದಿನ ಜೀವನ ವಿಕಾಸವಾಗಲಿಕ್ಕಾಗಿ ರಚಿಸಿದವು. ಆಪಸ್ತಂಬರ ಗೃಹ್ಯಸೂತ್ರಗಳು ವಿಶೇಷವಾಗಿ ಈ ಮುಂದೆ ಹೇಳಿರುವ ವಿಷಯಗಳ ಪರಿವಿಡಿಯಾಗಿದೆ. ಅಗ್ನಿ ಮುಖ ನಿರೂಪಣ. ವೈವಾಹಿಕ ವಿಷಯಗಳು, ವಿವಾಹ ಪ್ರಕರಣಗಳು ಋತು ಸಮಾವೇಶ, ಉಪನಯನಪ್ರಕರಣ, ಉಪಾಕರ್ಮ ಉತ್ಸರ್ಜನ ಪ್ರಕರಣ, ಸಮಾವರ್ತನ, ಮಧುಪರ್ಕ, ಸೀಮಂತ ಪ್ರಕರಣ, ಪುಂಸವನ, ಜಾತಕರ್ಮ, ನಾಮಕರಣ, ಅನ್ನಪ್ರಾಶನಂ, ಚೌಲ, ಗೃಹನಿರ್ಮಾಣ, ಗೃಹಪ್ರವೇಶವಿಧಿ, ಸರ್ಪಬಲಿ, ಆಗ್ರಯನ ಸ್ಥಾಲೀಪಾಕ, ಈಶಾನಬಲಿ, ಮಾಸಿ ಶ್ರಾದ್ಧ ಪ್ರಕರಣ, ಅಷ್ಟಕಾಶ್ರಾದ್ಧ ಇವುಗಳ ವಿಧಿ ನಿಯಮ ಪ್ರಯೋಗ. ಪ್ರಯೋಜನಗಳನ್ನು ವಿವರವಾಗಿ ಆಪಸ್ತಂಬರು ತಮ್ಮ ಗೃಹ್ಯಸೂತ್ರಗಳಲ್ಲಿ ವಿವರಿಸಿದ್ದಾರೆ. ಆಪಸ್ತಂಬ ಗೃಹ್ಯಸೂತ್ರಕ್ಕೆ ಶ್ರೀ ಹರದತ್ತ ಮಿಶ್ರ ಹಾಗೂ ಶ್ರೀ ಸುದರ್ಶನಾಚಾರ್ಯರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇದು ಸಂಸ್ಕೃತದಲ್ಲಿ ಹರಿದಾಸ ಸಂಸ್ಕೃತ ಗ್ರಂಥ ಮಾಲಾ ಪಮಾಖ್ಯ ಕಾಶೀ ಸಂಸ್ಕೃತ ಸರೀಜ ಪುಸ್ತಕ ಮಾಲೆಯವರಿಂದ ಬನಾರಸ್‌ನಲ್ಲಿ ೧೯೨೮ ರಲ್ಲಿ ಪಂಡಿತ ವಿ. ಚೆನ್ನಸ್ವಾಮಿ ಶಾಸ್ತ್ರಿಗಳವರ ಟಿಪ್ಪಣಿ, ಮುನ್ನಡಿಯೊಡನೆ ಪ್ರಕಟನೆಯಾಗಿದೆ. ೧೯೦೫ ರಲ್ಲಿ ಶ್ರೀಕೃಷ್ಣ ಯಜುರ್ವೇದ ಏಕಾಗ್ನಿಕಾಂಡ ಹಾಗೂ ಆಪಸ್ತಂಬರ ಧರ್ಮಸೂತ್ರಗಳು ಮೈಸೂರು ಮಹಾರಾಜರಾಗಿದ್ದ ಶ್ರೀ ಮತ್ ಕೃಷ್ಣರಾಜೇಂದ್ರ ಒಡೆಯರ್‌ರವರ ಆಸ್ಥಾನ ಧರ್ಮಾಧಿಕಾರಿಯಾದ ಚಕ್ರವರ್ತಿ ಅಯ್ಯಂಗಾರರ ವಿದ್ಯಾತರಂಗಿಣಿ ಮುದ್ರಾಲಯದಲ್ಲಿ ಪ್ರಕಟನೆಯಾಗಿದೆ.

ಆಪಸ್ತಂಬರ ಗೃಹ್ಯ ಸೂತ್ರದ ಮೊದಲನೆಯ ಸೂತ್ರವಿದು.

ಅಥ ಕರ್ಮಾಣ್ಯಾ
ಚಾರಾದ್ಯಾನಿ ಗೃಹ್ಯಂತೇ

ಇವಕ್ಕೆ ಹರದತ್ತರು ದ್ವಿಪ್ರಕಾರಾಣಿ ಕರ್ಮಾಣಿ, ಶ್ರುತಿ ಲಕ್ಷಣಾನಿ ಆಚಾರ ಲಕ್ಷಣಾ ಚ ತತ್ರ ಶ್ರುತಿಲಕ್ಷಣಾನಿ ವ್ಯಾಖ್ಯಾತಾನಿ--ಎಂಬುವುದಾಗಿ ಬರೆಯುತ್ತಾ ಕರ್ಮಗಳು ಎರಡು ವಿಧ- ಶ್ರುತಿಲಕ್ಷಣ, ಆಚಾರ ಲಕ್ಷಣಗಳು. ಶ್ರುತಿಲಕ್ಷಣ ಕರ್ಮಗಳು ವಿವಾಹಾದಿಗಳು. ಸುದರ್ಶನಾಚಾರ್ಯರ ತಾತ್ಪರ್ಯ ದರ್ಶನ ವ್ಯಾಖ್ಯಾನಪ್ರಕಾರ, ಶ್ರುತಿಲಕ್ಷಣಗಳಾದ ಇಪ್ಪತ್ತೊಂದು ಯಜ್ಞಗಳು ಅವುಗಳಲ್ಲಿ ಔಪಾಸನ ಹೋಮ, ವೈಶ್ವದೇವಂ, ಪಾರ್ವಣ, ಅಷ್ಟಕಾಮಾಸಿಶ್ರಾದ್ಧಂ, ಸರ್ಪಬಲಿಃ, ಈಶಾನ ಬಲಿಃ ಎಂಬ ಏಳುಪಾಕ ಯಜ್ಞ ಸಂಸ್ಥೆಗಳು. ಅಗ್ನಿಹೋತ್ರಂ, ದರ್ಶನಪೂರ್ಣ ಮಾಸಾ, ವಾಗ್ರಯಣಂ, ಚಾತುಮಾಸ್ಯಾ ನಿರೂಢಪಶುಬಂಧ, ಸೌತ್ರಾಮಣಿಃ ಎಂಬ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ಪೇಷ್ಕಾರ್.

ಹವಿಯಜ್ಞ ಸಂಸ್ಥೆಗಳು. ಇವು ಪಿಂಡಪಿತೃ ಯಜ್ಞಗಳೇ ಮೊದಲಾದ ದರ್ಶೀ ಹೋಮಗಳು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ, ಷೋಡಶಿ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ ಎಂಬ ಏಳು ಸೋಮ ಸಂಸ್ಥೆಗಳು. ಪ್ರತಿಯೊಬ್ಬರು ಜೀವನ ಪರ್ಯಂತ ಅನುಷ್ಠಾನ ಮಾಡಬೇಕಾದ ನಿತ್ಯ ನೈಮಿತ್ತಿಕ ಕರ್ಮಗಳು. ಇವುಗಳನ್ನು ಅನುಷ್ಠಾನ ಮಾಡಲು ಸಾಧ್ಯವಾಗದ ಪಕ್ಷದಲ್ಲಿ ಸಪ್ತಹವಿಯಜ್ಞಗಳನ್ನು ಆಚಾರಗಳನ್ನು ಆಪಸ್ತಂಬರು ವಿವರಿಸುತ್ತಾರೆ. ಆಚಾರಕ್ಕೆ ವೇದಮೂಲವೆಂದು ಅವರ ಅಭಿಪ್ರಾಯ.

ಕೃಷ್ಣಯಜುರ್ವೇದದ ಏಕಾಗ್ನಿ ಕಾಂಡದಲ್ಲಿ ವಿವಾಹ ಮಂತ್ರಗಳನ್ನು ಹೇಳುತ್ತಾ ಇಂದ್ರನು ವಧೂವರರನ್ನು ರಕ್ಷಿಸಲಿ ಎಂಬುವ ಮಂತ್ರ--

"ಪ್ರಸುಗ್ಮಂತಾಧಿಯ ಸಾನಸ್ಯ
ಸಕ್ಷಣಿ ವರೇಭಿರ್ವರಾಂ
ಅಭಿಷು ಪ್ರಸೀದತ
ಅಸ್ಮಾಕಂ ಇಂದ್ರ ಉಭಯಂ
ಜುಜೋಷತಿ ಯತ್ಸೌಮ್ಯ
ಸ್ಯಾಂಧಸೋ ಬುಭೋದತಿ"

ಆಪಸ್ತಂಬರು ವಿವಾಹಕಾಲದ ವಿಚಾರ ಹೇಳುತ್ತಾ--

ಸರ್ವ ಋತವೋ ವಿವಾಹಸ್ಯ ಶೌಶಿತೌ ಮಾಸಾ
ಪರಿಹಾಪ್ಯೋತ್ತಮಂ ಚ ನೈದಾಘಮ್

ವಿವಾಹಕ್ಕೆ ಶಿಶಿರ ಋತುವಿನ ಮಾಸಗಳಾದ ಮಾಘ ಪಾಲ್ಗುಣ ಮತ್ತು ಆಷಾಢ ಮಾಸಗಳನ್ನು ಬಿಟ್ಟು ಎಲ್ಲಾ ಮಾಸಗಳಲ್ಲಿ ಕೃಷ್ಣ ಪಕ್ಷದಲ್ಲೂ ಕೂಡ ಮದುವೆ ಮಾಡಬಹುದೆಂದು ತಿಳಿಸುತ್ತಾರೆ. ಯಾನಿಸರ್ವಾಣಿ ಪುಣ್ಯೋತ್ತಾನಿ ನಕ್ಷತ್ರಾಣಿ ತಾನಿ ಮಂಗಳಾನಿ. ಜ್ಯೋತಿಷ್ಯದಲ್ಲಿ ಶುಭ ಫಲ ಪ್ರದಗಳೆಂದು ಹೇಳಿರುವ ಶುಭನಕ್ಷತ್ರ ತಿಥಿ ಮುಹೂರ್ತಗಳಲ್ಲಿ ಮಂಗಳವಾದ್ಯ ಮಂಗಳದ್ರವ್ಯಗಳೊಡನೆ ವಿವಾಹವು ಶುಭಕರವು, ಮತ್ತೆ ವಿವಾಹಕ್ಕೆ ಯೋಗ್ಯವಾದ ವಧುವಿನ ಗುಣಗಳನ್ನು ಕುರಿತು ಆಪಸ್ತಂಬರು ಬಂಧುಶೀಲ ಲಕ್ಷಣ ಸಂಪನ್ನಾಂ ಅರೋಗಾಂ ಉಪಯಚ್ಛೇತ -- ಅಂದರೆ ವಿವಾಹವಾಗುವ ಕನ್ಯೆ ಸತ್ಕುಲ ಪ್ರಸೂತಳಾಗಿರಬೇಕು. ಬಂಧುಜನರಿಂದ ಕೂಡಿರಬೇಕು. ಲಕ್ಷಣ ಸಂಪನ್ನಳಾಗಿರಬೇಕು. ಕ್ಷಯ ಅಪಸ್ಮಾರಾದಿ ರೋಗ ರಹಿತಳಾಗಿರಬೇಕು ಎಂಬುವುದಾಗಿ ವರನ ಲಕ್ಷಣಗಳನ್ನು ಹೇಳುವಾಗ ಋಷಿ -- "ಬಂಧುಶೀಲ ಲಕ್ಷಣ ಸಂಪನ್ನಃ ಶ್ರುತವಾನ್ ಅರೋಗತಾ ಇತಿ ವರಸಂಪತ್" ಎಂಬು

ವುದಾಗಿ ತಿಳಿಸುತ್ತಾರೆ. ಆಪಸ್ತಂಬರು ಯಾವ ಕನ್ಯೆಯನ್ನು ವರನು ಮನಸಾ ಪ್ರೀತಿಸಿ ಅವಳಲ್ಲೇ ಅನುರಕ್ತನಾಗುತ್ತಾನೋ ಅಲ್ಲಿ ಪ್ರೀತಿ ಪ್ರಾಧಾನ್ಯವಾಗಿರುವುದರಿಂದ ಸೂತ್ರಕಾರರು "ಯಸ್ಯಾಂ ಮನಃ ಚಕ್ಷುಷೋಃ ನಿಬಂಧಃ ತಸ್ಯಾಮೃದ್ಧಿಃ ನ ಇತರತ್ ಆದ್ರಿಯತೇ ಇತ್ಯೇಕೇ" ಯಾವ ಕನ್ಯೆಯಲ್ಲಿ ವರನ ಮನಸ್ಸೂ ಕಣ್ಣುಗಳೂ ಸಹ ಬಂಧಿಸುವಂತೆ ಇರುತ್ತವಯೋ ಆ ಹೆಂಡತಿಯಲ್ಲಿ ವರನು ಚತುರ್ವಿಧ ಪುರುಷಾರ್ಥಗಳನ್ನು ಪಡೆಯುತ್ತಾನೆ. ಆದ್ದರಿಂದ ಮಿಕ್ಕ ಯಾವ ಗುಣ ದೋಷಗಳನ್ನು ಎಣಿಸಬಾರದು. ಅವರ ಮನಸ್ಸು ದೃಷ್ಟಿಗಳು ಐಕ್ಯವಾದ ಕಾರಣ, ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರುವ ನಿಷಿದ್ಧ ಗುಣಗಳಿದ್ದರೂ ವಧೂವರರ ಅನುರಾಗಕ್ಕೆ ಹೆಚ್ಚಿಗೆ ಪ್ರಾಧಾನ್ಯತೆ ಕೊಟ್ಟು ಮದುವೆ ಮಾಡಬಹುದೆಂದು ಆಪಸ್ತಂಬರ ಉದಾರಮತ, ಆಪಸ್ತಂಬರ ವಿವಾಹ ಸೂತ್ರಗಳು ಬಹಳ ಸಮಂಜಸವಾಗಿಯೂ, ಲೋಕ ಹಿತವಾಗಿಯೂ ಇವೆ. ಶಾಸ್ತ್ರಪ್ರಕಾರ ಸ್ತ್ರೀಯರಿಗೆ ಸೋಮದೇವನು ಶುಚಿತ್ವವನ್ನು ಕೊಟ್ಟಿರುತ್ತಾನೆ. ಗಂಧರ್ವನು ಶುದ್ಧವಾಣಿಯನ್ನು ಅಗ್ನಿಯು ಪಾವಿತ್ರ್ಯವನ್ನೂ ಕೊಟ್ಟಿರುತ್ತಾನೆ. ಆದ್ದರಿಂದ ಸ್ತ್ರೀಯರು ಸ್ಪರ್ಶ, ಆಲಿಂಗನ, ಸಮಯದಲ್ಲಿ ಶುದ್ಧವಾಗಿಯೇ ಇರುತ್ತಾರೆ. ಮನುವೂ ಕೂಡ ಸ್ತ್ರೀಯರು ಮಾನಸಿಕವಾಗಿ ಅಥವಾ ಬಲಾತ್ಕಾರವಾಗಿ ವ್ಯಭಿಚಾರಮಾಡಿದರೆ ಆ ಪಾಪವು ರಜೋದರ್ಶನದಿಂದ ಪರಿಹಾರವಾಗುತ್ತದೆಯೆಂದು ಹೇಳುತ್ತಾನೆ. ಯಾಜ್ಞವಲ್ಕರ ಮತವೂ ಕೂಡ ಇದೇ. ಆಪಸ್ತಂಬರು ವಿವಾಹ ವಿಹಿತಕರ್ಮಗಳನ್ನು ಕೂಲಂಕಷವಾಗಿ ಚತುರ್ಥ, ಪಂಚಮ, ಷಷ್ಠ, ಅಷ್ಟಮ, ನವಮ ಖಾಂಡಗಳಲ್ಲಿ ವಿವರಿಸಿದ್ದಾರೆ. ವರ ಪ್ರೇಷಣ, ಕನ್ಯೆಯ ಸಮೀಕ್ಷಣ, ಪಾಣಿಗ್ರಹಣವಿಧಿ ಸಪ್ತ ಪದೀಗಮನ, ವಿವಾಹದಲ್ಲಿ ಆಚರಿಸಬೇಕಾದ ಪ್ರಧಾನ ಹೋಮ, ಲಾಜ ಹೋಮ, ಅಗ್ನಿ ಪ್ರದಕ್ಷಿಣೆ, ಗೃಹಪ್ರವೇಶ, ವಧೂವರರು ಧ್ರುವ ಅರುಂಧತೀ ಅವರ ದರ್ಶನ, ವಿವಾಹ ಶೇಷಹೋಮ, ವಧೂವರರ ಸಮಾವೇಶನ ಋತುಗಮನಕಾಲ, ದಂಪತಿಗಳ ಪರಸ್ಪರ ಪ್ರೀತಿ ಜನಕವಾದ ಕರ್ಮಗಳು ಇತ್ಯಾದಿಗಳನ್ನು ಪರಿಷ್ಕರಿಸಿದ್ದಾರೆ.

ಅಷ್ಟಮ ಖಾಂಡದಲ್ಲಿ ೧೨ ನೇ ಸೂತ್ರ "ಯದಾ ಮಲವದ್ವಾಸಾಃ ಸ್ಯಾತ್ ಅಥೈನಾಂ ಬ್ರಾಹ್ಮಣ ಪ್ರತಿಷಿದ್ಧಾನಿ ಕರ್ಮಾಣಿ ಸಂ ಶಾಸ್ತ್ರೀಯಾಂ ಮಲವದ್ವಾಸಸ ಮಿತ್ಯೇತಾನಿ" ಈ ಸೂತ್ರದ ಪ್ರಕಾರ ರಜಸ್ವಲೆ ಯಾದ ಸ್ತ್ರೀಯರ ಸ್ಪರ್ಶ ಸಂಗವು ನಾಲ್ಕನೆಯ ದಿನ ವರೆಗೂ ನಿಷಿದ್ಧ. ಸ್ನಾನಕ್ಕೆ ಮೊದಲು, ಸ್ನಾನಾನಂತರದಲ್ಲೂ, ಅರಣ್ಯ ಪ್ರದೇಶಗಳಲ್ಲೂ ಮೈಥುನ ಮಾಡಬಾರದು. ಸ್ನಾನವಾದ ಮೇಲೂ ಆಕೆಯು ಪರಾಙ್ಮುಖಳಾದಾಗ ಅಥವಾ ಇಷ್ಟ ಪಡೆದಿದ್ದರೆ, ಆಕೆಯನ್ನು ಬಲಾತ್ಕಾರ ಮಾಡಬಾರದು ಎಂಬುವುದಾಗಿ ಆಪಸ್ತಂಬರು ತಿಳಿಸುತ್ತಾರೆ.

ಆಪಸ್ತಂಬರ ನವಮಖಾಂಡದಲ್ಲಿ--

ಚತುರ್ಥಿ ಪ್ರ ಭೃತಿ ಆಷೋಡಶೀಂ
ಉತ್ತರಾ ಮುತ್ತರಾಂ ಯುಗ್ಮಾಂ
ಪ್ರಜಾನಿ ಶ್ರೇಯಸಂ
ಋತುಗಮನಂ ಇತ್ಯುಪದಿಶಂತಿ

ಸ್ತ್ರೀಯರ ರಜೋದರ್ಶನದಿಂದ ಹದಿನಾರು ದಿವಸಗಳವರೆಗೆ ಗರ್ಭಧಾರಣೆಯ ಕಾಲ. ಈ ಹದಿನಾರು ರಾತ್ರಿಗಳಲ್ಲಿ ೬--೮--೧೦, ೧೨--೧೪--೧೬ ಸಮರಾತ್ರಿಗಳು ಸ್ತ್ರೀಯರಿಗೆ ಋತುಕಾಲಗಳು ಈ ಸಮದಿನಗಳಲ್ಲಿ ಸಮಾಗಮವು ಪುತ್ರೋತ್ಪತ್ತಿಗೆ ಶುಭಕರವು. ಸದ್ಗುಣ ಸಂಪನ್ನರಾದ ಆರೋಗ್ಯವಂತರಾದ ಮಕ್ಕಳು ಹುಟ್ಟುತ್ತಾರೆ -- ಎಂಬುದು ಆಪಸ್ತಂಬರ ಮತ. ಆಧುನಿಕ ಯುಗದಲ್ಲೂ ವೈಜ್ಞಾನಿಕರು ಇದನ್ನು ಅನುಮೋದಿಸಿದ್ದಾರೆ. ಯಾಜ್ಞವಲ್ಕರೂ ಕೂಡ ತಮ್ಮ ವಿವಾಹ ಪ್ರಕರಣವಲ್ಲಿ ಷೋಡಶರ್ತ್ಯು ನಿಶಾಃ ಸ್ತ್ರೀಣಾಂ ತಸ್ಮಿನ್ಯುಗ್ಮಾಸು ಸಂವಿಶೀತ್ --ಎಂಬುವುದಾಗಿ ಅಭಿಪ್ರಾಯ ಪಟ್ಟಿದ್ದಾರೆ.

ಕೃಷ್ಣ ಯಜುರ್ವೇದದ ಏಕಾಗ್ನಿ ಕಾಂಡದ ಏಕಾದಶಖಂಡದ ಶ್ರುತಿಯ--

ದಾತಾ ದದಾತು ನೋರಯಿಂ
ಈಶಾನೋ ಜಗತಸ್ಪತಿಃ
ಸ ನಃ ಪೂರ್ಣೇನ ವಾ ವನತ್

ಎಂಬುವುದನ್ನು ಆದರಿಸಿ ಆಪಸ್ತಂಬರು ಸೀಮಂತ ಕರ್ಮಗಳನ್ನು ವ್ಯಾಖ್ಯಾನಿಸುತ್ತಾ "ಸೀಮಂತೋನ್ನಯನಂ ಪ್ರಥಮೇ ಗರ್ಭಚತುರ್ಥೇ ಮಾಸಿ ಬ್ರಾಹ್ಮಣಾನ್ ಭೋಜಯಿತ್ವಾ........ಇತ್ಯಾದಿ. ಸೀಮಂತೋನ್ನಯ ನಂ ಎಂಬುವ ಕರ್ಮವನ್ನು ಗರ್ಭಿಣೀ ಸ್ತ್ರೀಯರ ಆರನೆಯ ಅಥವಾ ಎಂಟನೆಯ ತಿಂಗಳಲ್ಲಿ ಮಾಡುವ ಕರ್ಮ. ಗರ್ಭಿಣೀ ಸ್ತ್ರೀಯರ ಶಿರಸ್ಸಿನ ಕೂದಲಿನ ಮಧ್ಯದಲ್ಲಿರುವ ಸೀಮಂತ ವೆಂಬ ರೇಖೆಯನ್ನು ಎಳೆಯುವ ಕರ್ಮಕ್ಕೆ ಸೀಮಂತವೆಂದು ಹೆಸರು. ಪ್ರಥಮ ಗರ್ಭದಲ್ಲಿ ಮಾತ್ರ ಸೀಮಂತ ಮಾಡಬೇಕು. ತರುವಾಯ ಆದ ಗರ್ಭಗಳಲ್ಲಿ ಅಲ್ಲ, ಸೀಮಂತದ ದಿವಸ ಬ್ರಾಹ್ಮಣರಿಗೆ ಭೋಜನ ಅವರ ಆಶೀರ್ವಾದ ಪಡೆಯಬೇಕೆಂದು ವಿಧಿಸಿದ್ದಾನೆ. ಧರ್ಮಶಾಸ್ತ್ರಗಳ ಅಧ್ಯಯನದಿಂದ  ನಮ್ಮ ಪೂರ್ವಿಕರು ಧಾರ್ಮಿಕ ಜೀವನದ ನಿಯಮಗಳ ಚೌಕಟ್ಟಿನಲ್ಲಿ ಪ್ರತಿಯೊಬ್ಬರೂ ಶ್ರೇಯಸ್ಸನ್ನು ಪಡೆಯಬಹುದೆಂಬುದೇ ತಮ್ಮ ಉದ್ದೇಶವೆಂದು ಸಾರಿ ಹೇಳಿದ್ದಾರೆ. ಈ ದಿಕ್ಕಿನಲ್ಲಿ ಆಪಸ್ತಂಬರ ಧರ್ಮ ಸೂತ್ರಗಳು. ಗೃಹ್ಯಸೂತ್ರಗಳು ನಮಗೆ ಧರ್ಮ ಪ್ರಜ್ಞೆಯನ್ನು ನೀಡುತ್ತವೆ. ಅಂತಹ ಮಹರ್ಷಿ ಆಪಸ್ತಂಬರಿಗೆ ನಮೋನಮಃ

★

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೧ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ** **ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**ರಾತ್ರಿ ೮ ರ ವರೆಗೆ** **" " ೦--೫೦ (ಕಿರಿಯರಿಗೆ)**

# ಸಿರಿದೇವಿ ಗೋದಾ

---ಸಂತ ಹರಿಹರಾನಂದಸರಸ್ವತಿ.

ಸಿರಿವಿಲ್ಲಿ ಪುತ್ತೂರಿನ ಶ್ರೀವಟಪತ್ರಶಾಯಿಯ ದಿವ್ಯ ಸಾನ್ನಿಧ್ಯದಲ್ಲಿ ಪ್ರತಿದಿನವೂ "ಪುಷ್ಪಕೈಂಕರ್ಯ" ವನ್ನು ಸಲ್ಲಿಸುತ್ತಾ, ಶ್ರೀ ಸನ್ನಿಧಿಯ ಕೃಪೆಗೆ ಪಾತ್ರರಾದವರು ಶ್ರೀ ವಿಷ್ಣುಚಿತ್ತರು. ಅವರನ್ನು "ಪೆರಿಯಾಳ್ವಾರ್" ಎಂದೂ ಕರೆಯುತ್ತಾರೆ. ಪರಮಸಾತ್ವಿಕರಾದ ಪೆರಿಯಾಳ್ವಾರ್‌ರವರು ತಾವೇ ಬೆಳೆಸಿದ ಹೂವಿನ ತೋಟದಿಂದ ಬಗೆ ಬಗೆಯ ಪುಷ್ಪಗಳನ್ನು ಕಿತ್ತು ತಂದು, ತಮ್ಮ ತುಳಸಿಯ ಹೊಲದಿಂದ 'ತುಳಸಿ'ಯನ್ನು ಶೇಖರಿಸಿ--ಸುಂದರವಾದ ಒಂದು "ಪುಷ್ಪಮಾಲೆ" ಯನ್ನು ರಚಿಸಿ ಅದನ್ನು ಶ್ರೀ ವಟಪತ್ರಶಾಯಿಗೆ ಅರ್ಪಿಸಿ ಬರುವ ಪರಿಪಾಠವನ್ನು ಇಟ್ಟುಕೊಂಡಿದ್ದರು.

ಒಂದು ದಿನ ಪೆರಿಯಾಳ್ವಾರರು ತುಳಸಿಯ ತೋಟವನ್ನು ಅಗೆಸುತ್ತಿರುವಾಗ ಸುಂದರವಾದ ಒಂದು ಸ್ತ್ರೀ ಶಿಶುವು ಅವರಿಗೆ ದೊರಕಿತು. ಅಂದು ಆಷಾಢಮಾಸದ (ತಿರುವಾಡಿಪ್ಪೂರತ್ತಿಲ್) ಪುಬ್ಬಾ ನಕ್ಷತ್ರ ವಿತ್ತು. ಆ ಶುಭಗಳಿಗೆಯಲ್ಲಿ ದೊರೆತ ಹೆಣ್ಣುಶಿಶುವನ್ನು ಕಂಡು ಪೆರಿಯಾಳ್ವಾರರಿಗೆ ಆದ ಆನಂದಕ್ಕೆ ಪಾರವೇ ಇರಲಿಲ್ಲ. ಭೂಮಿ ಕೊಟ್ಟ ಮಗಳಾದ್ದರಿಂದ ಆ ಶಿಶುವಿಗೆ ಸಂಭ್ರಮದಿಂದ "ಗೋದಾ" ಎಂದು ನಾಮಕರಣ ಮಾಡಿದರು. ಶುಕ್ಲಪಕ್ಷದ ಚಂದ್ರನಂತೆ ದೇದೀಪ್ಯಮಾನ ತೇಜಸ್ಸಿನಿಂದ ಗೋದಾ ದಿನೇ ದಿನೇ ಬೆಳೆಯುತ್ತಿದ್ದಾಳೆ. ಪೆರಿಯಾಳ್ವಾರರು ಮಗುವಿನ ಲಾಲನೆ -- ಪಾಲನೆ -- ಪೋಷಣೆಯಲ್ಲಿ ಮೈಮರೆತರೂ ಸ್ವಾಮಿಗೆ ಸಲ್ಲಿಸದೇಕಾದ "ಪುಷ್ಪ ಕೈಂಕರ್ಯ" ಸೇವೆಯನ್ನು ಮಾತ್ರ ಮರೆತಿಲ್ಲ. ಎಂದಿನಂತೆಯೇ ದಿನವೂ ಪರಿಪಾಠ ಮುಂದುವರೆದಿದೆ. ಗೋದಾ ಈಗ ಆರೇಳು ವರ್ಷದ ಬಾಲೆ. ಮುದ್ದು ಮುದ್ದಾಗಿ ಮಾತನಾಡುತ್ತಾ ಆಟವಾಡಿಕೊಂಡು ತಂದೆಗೆ ಸಂತೋಷ ಕೊಡುತ್ತಿದ್ದಾಳೆ. ಆದರೆ ಅತಿ ವಿಲಕ್ಷಣಸ್ವಭಾವದ "ಗೋದೆ" ಎಲ್ಲ ಮಕ್ಕಳಂತಲ್ಲ, ಸದಾ ಭಗವದಾರಾಧನಾಸಕ್ತಳಾಗಿ ಆದಷ್ಟೂ ಬಾಹ್ಯಪ್ರಪಂಚದಿಂದ ಬೇರಾವುದೋ ಲೋಕದಲ್ಲಿರುವಂತೆ ಭಾವುಕಳಾಗಿ ಮೈಮರೆಯುತ್ತಾಳೆ. ಇದನ್ನು ತಂದೆ ಪೆರಿಯಾಳ್ವಾರರು ನಿತ್ಯವೂ ಗಮನಿಸಿಕೊಂಡೇ ಇದ್ದಾರೆ.

ಎಂದಿನಂತೆ ಅಂದೂ ಒಂದು ದಿನ ವಿಷ್ಣುಚಿತ್ತರು (ಸ್ನಾನಕ್ಕೆಮುನ್ನ) ಪುಷ್ಪಮಾಲೆಯನ್ನು ಸಿದ್ಧಪಡಿಸಿ, ಅದನ್ನು ಒಂದು ಬುಟ್ಟಿಯಲ್ಲಿರಿಸಿ ಸ್ನಾನಕ್ಕೆ ಹೋಗಿದ್ದಾರೆ. ಆಸಮಯ ಗೋದಾದೇವಿಯು ಸುಂದರವಾದ ಆ ಪುಷ್ಪ ಮಾಲೆಯನ್ನು ಕಂಡು ಆನಂದಿಸಿ -- ತಾನು ಅದನ್ನು ಮುಡಿದು ನಿಲುಗನ್ನಡಿಯ ಮುಂದೆ ನಿಂತು ತನ್ನನ್ನು ಒಮ್ಮೆ ನೋಡಿಕೊಂಡು ತಾನು ರಂಗನಾಥನಿಗೆ ತಕ್ಕವಧು ಎಂದು ಸಂತಸಪಟ್ಟು ತಂದೆಯವರು ಬರುವುದರೊಳಗೆ ಬುಟ್ಟಿಯೊಳಗೆ ಪುಷ್ಪಮಾಲೆಯನ್ನು ಇರಿಸಿ ಮರೆಯಾದಳು. ಸ್ನಾನದ ನಂತರ ಪೆರಿಯಾಳ್ವಾರರು ಅನುಷ್ಠಾನ ಪೂರೈಸಿ ಆ ದಿವ್ಯ-- 'ಮಾಲೆ'ಯನ್ನು ಶ್ರೀದೇವರಿಗೆ ಅರ್ಪಿಸಿ ಮನೆಗೆ ಮರಳಿದರು. ಮತ್ತೆ ಮರುದಿನವೂ ಗೋದೆಯು 'ಮಾಲೆ'ಯನ್ನು ಧರಿಸಿ ಸಂತೋಷದಿಂದಲುಬ್ಬಿದಳು. ಈ ಪ್ರಕಾರ ಐದಾರು ದಿನಗಳು ಕಳೆಯಿತು. ತಂದೆ ಒಂದು ದಿನ ಪ್ರಾತಃಕಾಲ ಮಗಳು -- ಮಾಲೆಯನ್ನು ಧರಿಸಿ -- ಕನ್ನಡಿಯ ಮುಂದೆ ನಿಂತು ಮೈಮರೆತಿರುವುದನ್ನು ಕಂಡುಬಿಟ್ಟರು. ಅವರಿಗೆ ಒಂದರೆಕ್ಷಣ ತತ್ತರಿಸುವಂತಾಯಿತು. ಸ್ವಲ್ಪ ಸಿಡುಕಿನಿಂದಲೇ ಏನು ಮಾಡಿದೆಯಮ್ಮ ಗೋದಾ ಎಂದರು. ಅತಿಗಾಬರಿಯಿಂದ ಗೋದಾ ಮಾಲೆಯನ್ನು ಬುಟ್ಟಿಯಲ್ಲಿರಿಸಿ -- ಇನ್ನೇನು ಹೊರಗೆ ಹೋಗುವುದರಲ್ಲಿದ್ದಳು. ಮುಂದು ವರೆದು -- ತಂದೆಯವರು ಎಂತಹ ಕೆಲಸ ಮಾಡಿಬಿಟ್ಟೆ ಮಗಳೇ. ಶ್ರೀದೇವರಿಗೆ ಅರ್ಪಿಸುವ ಮಾಲೆಯನ್ನು ನೀನು ಮುಡಿದು ಪುಷ್ಪಕೈಂಕರ್ಯದ ನನ್ನ ಕರ್ತವ್ಯಕ್ಕೆ ಚ್ಯುತಿ ತಂದೆಯಲ್ಲಮ್ಮಾ. ಮೈಲಿಗೆಯಾದ ಅದನ್ನು ಶ್ರೀದೇವರಿಗೆ ಅರ್ಪಿಸುವುದಾದರೂ ಹೇಗೆ? ಎಂದು ದುಃಖಿಸಿದರು. ತಾನು ತಪ್ಪುಮಾಡಿದೆನೇನೋ ಎಂಬ ಭಾವನೆಯಿಂದ ಮನ್ನಿಸಿ ಎನ್ನುವಂತೆ ತಂದೆಯವರ ಮುಖ ನೋಡಿ ಗೋದಾ ಮರೆಯಾದಳು. ಪೆರಿಯಾಳ್ವಾರರು ಅಂದು ಶ್ರೀ ವಟಪತ್ರಶಾಯಿಗೆ "ಮಾಲೆ"ಯನ್ನರ್ಪಿಸಲು ಹೋಗಲೇ ಇಲ್ಲ. ಅಂದೆಲ್ಲ ಅವರಿಗೆ ಬಹು ದೇಸರವಾಗಿತ್ತು. ರಾತ್ರಿ ಸಹ ನಿರಾಹಾರಿಗಳಾಗಿ ಚಿಂತೆಯಲ್ಲಿಯೇ ಮಲಗಿದರು. ಅಂದು ರಾತ್ರಿ ಸರಿಯುತ್ತಾಬಂದು ಬೆಳಗಾಗುವ ಮುನ್ನ ಭಗವಂತನು ಪೆರಿಯಾಳ್ವಾರರ ಸ್ವಪ್ನದಲ್ಲಿ ದರ್ಶನವಿತ್ತು ವತ್ಸಾ, ನಿನ್ನ ಕರ್ತವ್ಯವನ್ನೇಕೆ ಇಂದು ಮರೆತೆ? ಪುಷ್ಪಮಾಲೆಯನ್ನೇಕೆ ಅರ್ಪಿಸಲಿಲ್ಲ? ಎಂದು ಪ್ರಶ್ನಿಸಿದ. ತರುವಾಯ ಪೆರಿಯಾಳ್ವಾರರು 'ಸ್ವಾಮಿ, ನನ್ನನ್ನು ಕ್ಷಮಿಸು ತಂದೆ. ಇಂದು ಮಾಲೆಯನ್ನು ನಿನಗೆ ಅರ್ಪಿಸುವುದಕ್ಕೆ ಮುನ್ನವೇ ನನ್ನ ಮಗಳು 'ಗೋದಾ' ಮುಡಿದುದರಿಂದ ಅದು ನಿನಗೆ ಅರ್ಪಿಸಲು ಯೋಗ್ಯವಲ್ಲವೆಂದು ಸುಮ್ಮನಾದೆ' ಎಂದು ತಮ್ಮ ಅಳಲನ್ನು ತೋಡಿಕೊಂಡರು. ನಸುನಕ್ಕು ಭಗವಂತನು -- ವಿಷ್ಣುಚಿತ್ತಾ, ಇಷ್ಟಕ್ಕೇಕೆ ಚಿಂತೆ ಪಡುತ್ತಿರುವೆ? ಅದನ್ನು --ಆ 'ಮಾಲೆ'ಯನ್ನು ಗೋದೆ ಮುಡಿದ ಮೇಲೆಯಲ್ಲವೇ ಅದಕ್ಕೆ ಅಷ್ಟು ಪರಿಮಳ -- ಸೌಂದರ್ಯ ಬಂದಿರುವುದು. ಆದ್ದರಿಂದ -- ಇನ್ನುಮುಂದೆ ಗೋದಾದೇವಿ ಮುಡಿದ ನಂತರವೇ ನನಗೆ ಮಾಲೆಯನನು ಅರ್ಪಿಸಬೇಕು. ತಿಳಿಯಿತೇ? ಚಿಂತೆ ಬೇಡ. ಇಂದಿನಿಂದ ಅವಳು "ಶೂಡಿಕ್ಕೊಡುತ್ತ ನಾಚ್ಚಿಯಾರ್" ಎಂದ ಪ್ರಖ್ಯಾತಿಳಾಗಲಿ ಎಂದು ಹರಸಿ ಅದೃಶ್ಯನಾದ "ಭಗವಂತ" ಬೆಳಗಾದನಂತರ ಪೆರಿಯಾಳ್ವಾರರು ತಮ್ಮ ಮಗಳಿಗೆ ಸ್ವಪ್ನವೃತ್ತಾಂತವನ್ನು ತಿಳಿಸಿ, ಮಗಳೇ ನೀನು ಸಾಮಾನ್ಯ ಮಾನವಸ್ತ್ರೀಯಲ್ಲವೆಂದು ನಾನು ಭಾವಿಸಿದ್ದೇನೆ. ನಿನ್ನಲ್ಲಿ 'ದೇವತಾ' ಲಕ್ಷಣಗಳಿವೆ. ಇಂದಿನಿಂದ ನಿನ್ನನ್ನು ನಾನು "ಆಂಡಾಳ್" ಎಂದು ಕರೆಯಲು ಇಚ್ಚೆಸುತ್ತೇನೆ. ಮಗಳೇ ನೀನು ಸಾಮಾನ್ಯರಿಗೆ ವಧುವಾಗುವವಳಲ್ಲ--ಎಂದು ಗೋದಾಳನ್ನು ಕೊಂಡಾಡುತ್ತಾ, "ನೂರ ಎಂಟು"ಪವಿತ್ರ ತೀರ್ಥಕ್ಷೇತ್ರಗಳ ಅಧಿವಾಸನಾದ ಭಗವಂತನ ಅನಂತ ಮಹಿಮಾತಿಶಯಗಳನ್ನು ವಿವರವಾಗಿ ತಿಳಿಸಿ ಹೇಳಿದರು. ನಂತರ ಪೆರಿಯಾಳ್ವಾರರು-- ಅಮ್ಮಾ ಮಗಳೇ ಇ... ರಲ್ಲಿ ನೀನು ಯಾರನ್ನು ನಿನ್ನ ಪತಿಯಾಗಿ ಆ... ಸುತ್ತೀಯೋ, ವರಿಸುತ್ತೀಯೋ ಅವನಿಗೇ ನಾನ...



ನಿನ್ನನ್ನು ಕೊಟ್ಟು ವಿಧ್ಯುಕ್ತವಾಗಿ "ಧಾರೆ" ಎರೆದು ವಿವಾಹ ನೆರವೇರಿಸುತ್ತೇನೆ ಎಂದರು. ಗೋದಾದೇವಿಯು -- ಮಂಗಳ ಮೂರುತಿಯಾದ ಶ್ರೀರಂಗದ ರಂಗನಾಥನನ್ನು ತಾನು ವರಿಸಿರುವುದಾಗಿಯೂ ಆತನೇ ತನಗೆ ಪತಿಯೆಂದೂ ತನ್ನ ನಿರ್ಧಾರವನ್ನು ತಿಳಿಸಿದಳು. ಸಂತುಷ್ಟರಾದ ಪೆರಿಯಾಳ್ವಾರರು ಅತ್ಯಂತ ಸಂಭ್ರಮದಿಂದ ಶ್ರೀರಂಗನಾಥನಿಗೇ (ತಮ್ಮ ಮಗಳ ಇಚ್ಛೆಯಂತೆ) ಮಗಳನ್ನು ಧಾರೆ ಎರೆದು ಕೊಡುವ ಸಂಕಲ್ಪ ಮಾಡಿದರು. ಕೆಲವು ದಿನಗಳು ಕಳೆದಿವೆ. ಎಂದಿನಂತೆಯೇ ಪೆರಿಯಾಳ್ವಾರರು ತಮ್ಮ ಮಗಳು ಗೋದೆಯು ಮುಡಿದ ಮೇಲೆಯೇ ಪುಷ್ಪಮಾಲೆಯನ್ನು (ಅರ್ಪಿಸಿ) ವಟಪತ್ರಶಾಯಿಗೆ ಅರ್ಪಿಸಿ ಶ್ರೀಸ್ವಾಮಿಯ ಕೃಪೆಗೆ ಪಾತ್ರರಾಗುತ್ತಿದ್ದಾರೆ. ಒಂದು ಬೆಳಗಿನಝಾವ ಶ್ರೀ ವಟಪತ್ರಶಾಯಿಯು ಪೆರಿಯಾಳ್ವಾರರ ಸ್ವಪ್ನದಲ್ಲಿ ದರ್ಶನವಿತ್ತು, ವತ್ಸಾ, ನಿನ್ನ ಸಂಕಲ್ಪವನ್ನು ಮರೆತೆಯಾ? ಗೋದಾದೇವಿಯನ್ನು ನನಗೆ ಧಾರೆ ಎರೆದು ಕೊಡುವುದಾಗಿ ಸಂಕಲ್ಪಿಸಿದು ಮರೆತು ಹೋಯಿತೇನು? ಎಂದು ಪ್ರಶ್ನಿಸುತ್ತಾನೆ.

ಪೆರಿಯಾಳ್ವಾರರು -- ಶ್ರೀಸ್ವಾಮಿಯ ಮಾಲೆಗೆ -- ಕಂಬನಿದುಂಬಿ ಗದ್ಗದಿತರಾಗಿ ನುಡಿದರು -- ಇಲ್ಲ ದೇವಾ -- ನಾನದನ್ನು ಮರೆಯಲಿಲ್ಲ. ಸಧ್ಯದಲ್ಲಿಯೇ ಮಂಗಳಕಾರ್ಯಕ್ಕೆ ಮುಹೂರ್ತ ನೋಡಿ, ಹೇ ರಂಗನಾಥ -- ನಿನ್ನನ್ನು ಇಲ್ಲಿಗೆ ಕರೆಸಿಕೊಂಡು, ನನ್ನ ಸಂಕಲ್ಪದಂತೆ (ನಿನ್ನ ಇಷ್ಟದಂತೆ) ವಿವಾಹವನ್ನು ನೆರವೇರಿಸುತ್ತೇನೆಂದು ಹೇಳಿ -- ತಮ್ಮ ಸಿರಿವಿಲ್ಲಿಪುತ್ತೂರಿನ ಭಕ್ತ ಬಾಂಧವರನ್ನೆಲ್ಲ ಕರೆಯಿಸಿ ತಮ್ಮ ಮಗಳು ಗೋದೆಯ ಇಚ್ಛೆಯನ್ನು, ತಮ್ಮ ಸತ್ಸಂಕಲ್ಪವನ್ನು "ಶ್ರೀ ರಂಗನಾಥನ ಪರಮಾನುಗ್ರಹ"ವಾದುದನ್ನೂ ತಿಳಿಸಿ ಒಂದು ಪ್ರಶಸ್ತ ಮುಹೂರ್ತದಲ್ಲಿ ತಾವೇ ಶ್ರೀರಂಗಕ್ಕೆ ತೆರಳಿ, ಶ್ರೀರಂಗನಾಥನ ದಿವ್ಯದರ್ಶನ ಪಡೆದು, ಹೇ! ದಯಾನಿಧೇ, ನನ್ನ ಮಗಳನ್ನು ನೀನು ನಿನ್ನ ವಧುವಾಗಿ ಸ್ವೀಕರಿಸಲು ಸಿರಿವಿಲ್ಲಿಪುತ್ತೂರಿನ ವರೆಗೆ ಬಿಜಯಮಾಡಿಸಿ ನಮ್ಮನ್ನು ಅನುಗ್ರಹಿಸಬೇಕೆಂದು ಬಿನ್ನವಿಸಿಕೊಂಡು ವಿಲ್ಲಿಪುತ್ತೂರಿಗೆ ಹಿಂತಿರುಗಿದರು. ಶ್ರೀ ಪೆರಿಯಾಳ್ವಾರರ ಪ್ರಾರ್ಥನೆಯನ್ನ ಅಂಗೀಕರಿಸಿದ ಶ್ರೀರಂಗನಾಥನು ಶ್ರೀವಿಲ್ಲಿಪುತ್ತೂರಿಗೇ ಬಂದು ವಿಧ್ಯುಕ್ತವಾಗಿ 'ಗೋದೆ'ಯನ್ನು ಮಡದಿಯಾಗಿ ಸ್ವೀಕರಿಸಿ ನೆರೆದವರೆಲ್ಲರನ್ನೂ ಪೆರಿಯಾಳ್ವಾರರೊಂದಿಗೆ ಅನುಗ್ರಹಿಸಿ 'ಗೋದಾ' ದೇವಿಯೊಂದಿಗೆ ಶ್ರೀರಂಗಕ್ಕೆ ಮರಳಿದ.

ಪೆರಿಯಾಳ್ವಾರರು ಧನ್ಯತೆಯ ಭಾವದಲ್ಲಿ ಮೈಮರೆತು ರಂಗನಾಥನನ್ನೇ ಧ್ಯಾನಿಸುತ್ತ ಕೊಂಚಕಾಲ ಅಂತರ್ಮುಖಿಯಾಗಿದ್ದರು.

ಶ್ರೀರಂಗಮಂಗಳನಿಭಂ ಕರುಣಾನಿವಾಸಂ
ಶ್ರೀವೇಂಕಟಾದ್ರಿ ಶಿಖರಾಲಯಕಾಲಮೇಘಂ
ಶ್ರೀಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲ ದೀಪಂ

"ಆಂಡಾಳ್ ತಿರುವಡಿಗಳೇ ಶರಣಂ"



# ಕವನ ಪತ್ರ

## ನಮೋ ವೆಂಕಟೇಶ

---ವಿದ್ವಾನ್ ಬಿ. ಆರ್. ಶೇಷಾದ್ರಿ.



ರಾಗ -- ಅಭೇರಿ　　　　ತಿಶ್ರನಡೆ -- ಏಕತಾಳ

ನಮೋ ನಮೋ ವೆಂಕಟೇಶ, ನಮೋ ನಮೋ ಶ್ರೀನಿವಾಸ
ನಮೋ ನಮೋ ತಿರುಮಲೇಶ, ಪೀತಾಂಬರಧಾರಿ ನಮೋ

ನಮೋ ಭಕ್ತಮಂದಾರಂ, ನಮೋ ನಯನ ಸುಂದರಂ
ನಮೋ ಶಕ್ತಿ ಕಾರಕಂ, ನಮೋ ಮುಕ್ತಿದಾಯಕಂ　　|| ನಮೋ ||

ಶಂಖ ಚಕ್ರ ಗದಾ ಪದ್ಮ ಶೋಭಿತಂ ನಿರಂತರಂ
ನಿಖಿಲ ಲೋಕ ನಾಯಕಂ, ಸಕಲ ಭುವನ ಪಾಲಕಂ　　|| ನಮೋ ||

ನಮೋ ಸಪ್ತ ಗಿರೀಶಂ, ತಪ್ತ ಜನೋದ್ಧಾರಕಂ
ನಮೋ ದುಷ್ಟ ಶಿಕ್ಷಕಂ, ನಮೋ ಶಿಷ್ಟರಕ್ಷಕಂ　　|| ನಮೋ ||

ನಮೋ ಶೇಷ ಶಾಯಿನೇ, ಶೇಷಾಚಲ ವಾಸಿನೇ
ನಮೋ ನಮೋ ಪರಮಾತ್ಮಂ, ನಮೋ ಹರಿದಾಸ ಪ್ರಿಯಂ　　|| ನಮೋ ||

## ಗುಣ ಪರೀಕ್ಷೆ

---ಗುರುರಾಜ ಬೆಣಕಲ್.

ತಂದೆಯು ತನ್ನಯ ಮಕ್ಕಳ ಪರಿಕಿಸ
ಲೆಂದಿಚ್ಛೆಸಿದನು ಒಂದು ದಿನ
ಮೂವರ ಕರದಲಿ ನೂರರ ನೋಟನು
ಇಡುತಲಿ ಹೀಗೆ ಹೇಳಿದ ಕಣಾ

ನೀಡಿದ ಹಣದಲಿ ಕೋಣೆಯ ತುಂಬುವ
ವಸ್ತುವು ಒಂದನು ತರಬೇಕು,
ತಂದಿಹ ವಸ್ತುವು ನಿಮ್ಮ ಬುದ್ಧಿಯ
ಪ್ರತಿ ಬಿಂಬಿಸುವಂತಿರಬೇಕು

ಎಂದಿರೆ, ಜೇಷ್ಠನು ಮೇವನು ತಂದು
ತುಂಬಿದ ಆಗ ಕೋಣೆಯಲಿ,
ಎರಡನೆ ಮಗನು ಸೌದೆಯ ತುಂಬಿದ
ತಂದೆಯ ಮೆಚ್ಚುಗೆ ಬಯಸುತಲಿ

ಮೂರನೆ ಮಗನು ಬೆಳಕನು ತುಂಬಿದ
ಬೆಳಗುವ ಹಣತೆಯ ಇರಿಸುತಲಿ,
ಇದನು ಕಾಣುತಲೆ "ಜಾಣ"ನೀನೆಂದನು
ಮೂರನೆ ಮಗನನು ಹರಸುತಲಿ

## ಕೌಪೀನ ಪಂಚಕ

---ಡಿ. ಕೆ. ಸುಬ್ರಹ್ಮಣ್ಯಂ.

(ಶಂಕರಾಚಾರ್ಯರ ಪದ್ಯಾನುವಾದ)

ವೇದಾಂತ ವಾಕ್ಯದಲಿ ರಮಿಸುತಿಹನವನು ತಾ
ಭಿಕ್ಷಾನ್ನ ಮಾತ್ರದಲಿ ತೃಪ್ತಿ ಪಡೆದಿಹನು
ಶೋಕದೂರನು ಅವನು ಪರಮ ಕರುಣಾಶಾಲಿ
ಕೌಪೀನಧಾರಿಯವ ಬಹು ಭಾಗ್ಯಶಾಲೀ,

ತರುತಲವೆ ಅವನಿಂಗೆ ವಸತಿಯಾಗಿರಲು
ಜೋಡಿಸಿದ ಕರವೆರಡು ಭಿಕ್ಷಾನ್ನಪಾತ್ರೆ
ನಾರಿಯೊಲು ನಿಂದ್ಯವೈ ಕಾಷಾಯ ವವನಿಂಗೆ
ಕೌಪೀನ ಧಾರಿಯವ ಬಹು ಭಾಗ್ಯಶಾಲೀ

ಆತ್ಮನಲಿ ಆತ್ಮನನು ಕಾಣುತಿಹನಾವಗಂ
ತೊರೆದಿರುವನವನು ತಾ ದೇಹದಭಿಮಾನ
ಪರಬ್ರಹ್ಮಲೀನವೈ ಅವನ ಚಿತ್ತವೃತ್ತಿ
ಕೌಪೀನ ಧಾರಿಯವ ಬಹು ಭಾಗ್ಯಶಾಲೀ

ಚಿದಾನಂದರೂಪಿ ತಾನಾವಗಂ ಸಂತುಷ್ಟ
ಶಾಂತಮಾಗಿಹುದವನ ಇಂದ್ರಿಯ ವೃತ್ತಿ
ಆದಿ ಮಧ್ಯಾಂತಗಳ ಭೇದಮವನಿಂಗಿಲ್ಲ
ಕೌಪೀನ ಧಾರಿಯವ ಬಹು ಭಾಗ್ಯಶಾಲೀ

ಜಪಗೈವ ನೆಡಬಿಡದೆ ಪಂಚಾಕ್ಷರೀ ಮಂತ್ರ
ಪಶುಪತಿಯ ಹೃದಯದಲಿ ಭಾವಿಸುವನು
ಭಿಕ್ಷಾನ್ನ ಜೀವಿಯವ ಅಲೆವ ದಿಕ್ತಟಗಳಲಿ
ಕೌಪೀನ ಧಾರಿಯವ ಬಹು ಭಾಗ್ಯಶಾಲೀ



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/–

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇವಸ್ಥಾನಗಳ

ತಿರುಪತಿ -- 517 50'

# ಹಂಪಿ ಕ್ಷೇತ್ರ ವರ್ಣನೆ

---ಡಿ. ರಾಮಕೃಷ್ಣಾರಾವ್.

ಇದು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನಲ್ಲಿದೆ. ಹಂಪೆಗೆ ಹೋಗುವವರು ಹೊಸಪೇಟೆಗೆ ಬಂದು ಹೋಗಬೇಕು. ಹೊಸಪೇಟೆಗೆ ರಾಜ್ಯದ ಎಲ್ಲಾ ಕಡೆಗಳಿಂದಲೂ ಬಸ್ಸಿನ ಸೌಕರ್ಯ ಇದೆ. ಅಲ್ಲದೆ ರೈಲಿನ ಸೌಕರ್ಯ ಸಹ ಇದೆ. ಹೊಸಪೇಟೆಯಿಂದ ಹಂಪೆಗೆ ೫ ಮೈಲಿ ದೂರವಿದೆ. ಹಂಪೆಯಲ್ಲಿ ನೋಡತಕ್ಕ ಸ್ಥಳಗಳು ಒಂದಕ್ಕು ಮತ್ತೊಂದಕ್ಕು ಬಹುದೂರವಿರುವುದರಿಂದ ಅವುಗಳು ಇರುವ ಸ್ಥಳಗಳು ಹೊಸದಾಗಿ ಬಂದವರಿಗೆ ತಿಳಿಯದಿರುವುದರಿಂದ ಹಂಪೆಯನ್ನು ನೋಡಬಯಸುವರು ಮಾರ್ಗದರ್ಶಿಗಳನ್ನು ಕರೆದುಕೊಂಡು ಹೋಗುವುದು ಒಳ್ಳೆಯದು.

## ೧. ವಿರೂಪಾಕ್ಷ ದೇವಾಲಯ :

ಹೊಸಪೇಟೆಯಿಂದ ಹೊರಟ ಬಸ್ಸು ನೇರವಾಗಿ ಹಂಪಿಯ ವಿರೂಪಾಕ್ಷದೇವಾಲಯದ ಹತ್ತಿರ ನಿಲ್ಲುತ್ತದೆ. ಭವ್ಯವಾಗಿ ವಿಸ್ತಾರವಾಗಿ ಕಂಗೊಳಿಸುವುದೇ ವಿರೂಪಾಕ್ಷದೇವಾಲಯದ ಗೋಪುರ. ಈ ಗೋಪುರವು ಸುಮಾರು ೧೬೫ ಅಡಿ ಎತ್ತರವಿದ್ದು ಕೆಳಭಾಗ ೧೫೦ ಅಡಿ ಅಗಲವಾಗಿಯೂ ೧೨೦ ಅಡಿ ಉದ್ದವಾಗಿಯು ಇದ್ದು ಹನ್ನೊಂದು ಅಂತಸ್ತುಗಳಿಂದ ಕೂಡಿದೆ. ಈ ಗೋಪುರ ಯಾವಾಗ ಯಾರಕಾಲದಲ್ಲಿ ನಿರ್ಮಾಣಗೊಂಡಿದೆ ಎಂಬುದು ನಿರ್ದಿಷ್ಟವಾಗಿ ಗೊತ್ತಿಲ್ಲ. ೧೫೧೦ ರಲ್ಲಿ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಜೀರ್ಣೋದ್ಧಾರವಾಯಿತೆಂದು ತಿಳಿದುಬಂದಿದೆ. ಅಂದರೆ ಈ ಗೋಪುರ ಕೃಷ್ಣದೇವರಾಯನ ರಾಜ್ಯಭಾರಕ್ಕೆ ಮೊದಲೆ ನಿರ್ಮಾಣಗೊಂಡಿದೆ ಎಂಬುದು ಇದರಿಂದ ತಿಳಿದುಬರುತ್ತದೆ.

ಈ ದೇವಾಲಯದ ಮೂಲಕ ಒಳಗೆ ಸಾಗಿದರೆ ದೇವಾಲಯದ ದೊಡ್ಡ ಪ್ರಾಕಾರವಿದೆ. ಪ್ರಾಕಾರದ ನೆಲಕ್ಕೆ ಕಲ್ಲುಗಳನ್ನು ಹಾಸಿದೆ. ಈ ಪ್ರಾಕಾರದ ನಡುವೆ ಒಂದು ಕಾಲುವೆ ಇದೆ. ಇದರಲ್ಲಿ ತುಂಗಭದ್ರಾ ನದಿಯ ನೀರು ಹರಿಯುತ್ತಿರುತ್ತದೆ. ಇದರ ಮೇಲೆ ಕಲ್ಲಿನಿಂದ ಮುಚ್ಚಲ್ಪಟ್ಟಿದೆ. ಈ ಪ್ರಾಕಾರದಲ್ಲಿ ಪರಸ್ಥಳದಿಂದ ಯಾತ್ರಿಕರು ಉಳಿಯಲು ವಸತಿಗೃಹವಿದೆ. ದೇವಾಲಯದ ಕಛೇರಿಯೂ ಇದೆ. ದೊಡ್ಡದಾದ ಪಾಕಶಾಲೆ ಇದೆ. ಬಲಭಾಗದಲ್ಲಿ ಕಲ್ಯಾಣಮಂಟಪವು ಸಹ ಇದೆ.

ವಿರೂಪಾಕ್ಷ ದೇವಾಲಯಕ್ಕೆ ೨ ಗೋಪುರಗಳುಂಟು. ಮೊದಲನೆ ಪ್ರಾಕಾರದಿಂದ ಪಶ್ಚಿಮಕ್ಕೆ ಹೋದರೆ ಮತ್ತೊಂದು ಗೋಪುರ ಕಾಣಬರುತ್ತದೆ. ಈ ಗೋಪುರಕ್ಕೆ ರಾಯಗೋಪುರವೆಂದು ಹೆಸರು. ಈ ಗೋಪುರವನ್ನು ಶ್ರೀಕೃಷ್ಣದೇವರಾಯ ತನ್ನ ಪಟ್ಟಾಭಿಷೇಕದ ಸವಿನೆನಪಿನ ಕಾಣಿಕೆಯಾಗಿ ಇದನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಈ ಗೋಪುರದ ಮೂಲಕ ಪ್ರವೇಶ ಮಾಡಿದರೆ ೨ನೇ ಪ್ರಾಕಾರ ಸಿಗುವುದು. ಈ ಪ್ರಾಕಾರದಲ್ಲಿ ಧ್ವಜಸ್ತಂಭ, ದೀಪಸ್ತಂಭಗಳನ್ನು ಕಾಣಬಹುದು. ಇದರ ಎಡಭಾಗದಲ್ಲಿ ಪಾತಾಳೇಶ್ವರ, ಮುಕ್ತಿನರಸಿಂಹ, ಸೂರ್ಯನಾರಾಯಣ, ಲಕ್ಷ್ಮೀನರಸಿಂಹ, ಮಹಿಷಾಸುರಮರ್ಧಿನಿ, ಶ್ರೀ ವೆಂಕಟೇಶ್ವರ ದೇವಾಲಯಗಳಿವೆ.

ಎದುರಿಗಿರುವುದೇ ವಿರೂಪಾಕ್ಷದೇವಾಲಯ. ವಿರೂಪಾಕ್ಷನನ್ನು ಪಂಪಾಪತಿಯೆಂದು ಕರಿಯುವುದುಂಟು. ಪಂಪಾಪತಿಯ ದೇವಾಲಯವೇ ಅತ್ಯಂತ ಪ್ರಾಚೀನದೇವಾಲಯ. ಈ ದೇವಾಲಯದ ಬಾಗಿಲು ಸೊಗಸಾದ ಕುಸುರಿ ಕೆಲಸದಿಂದ ಕೂಡಿದೆ. ದೇವಾಲಯದ ಕಂಬಗಳು ಚರಕಿಯಂತ್ರದಿಂದ ಕಡೆದಿದೆ. ಇದು ಹೊಯ್ಸಳರ ಕಾಲದ ಪ್ರಾಚೀನದೇವಾಲಯ. ಇಲ್ಲಿಯ ಶಾಸನಗಳ ಪ್ರಕಾರ ಮೂಲದೇವಾಲಯದ ಸುತ್ತ ಮೊದಲನೆ ಹರಿಹರನು ದೇವಾಲಯದ ಕೆಲವು ಭಾಗಗಳನ್ನು ಕಟ್ಟಿಸಿದನು. ೧೫೦೯ -- ೧೦ ರಲ್ಲಿ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸ್ಮರಣಾರ್ಥವಾಗಿ ದೇವಾಲಯದ ರಂಗಮಂಟಪ ಕಟ್ಟಿಸಿದನು.

ವಿರೂಪಾಕ್ಷದೇವರ ದರ್ಶನ ಪಡೆದು ಹೊರಬಂದರೆ ಉತ್ತರದಿಕ್ಕಿಗೆ ೨ ದೇವಾಲಯಗಳನ್ನು ಕಾಣಬಹುದು. ಒಂದು ಪಂಪಾಪತಿ ಮತ್ತೊಂದು ಭುವನೇಶ್ವರಿ ಮೂರ್ತಿ. ಇವು ಅತ್ಯಂತ ಸುಂದರ ಮೂರ್ತಿಗಳು. ಪಂಪಾಪತಿ ಮಂದಿರ ಹೊರಗಡೆ ಭಾಗದಲ್ಲಿ ನವಗ್ರಹಗಳನ್ನು ಪ್ರತಿಷ್ಠಿಸಲಾಗಿದೆ.

ಉತ್ತರಭಾಗದಲ್ಲಿ ಮತ್ತೊಂದು ಗೋಪುರ ಕಾಣುತ್ತದೆ. ಇದನ್ನೇ ಕನಕಗಿರಿಗೋಪುರವೆಂದು ಕರೆಯುತ್ತಾರೆ. ಈ ಗೋಪುರದಲ್ಲಿ ರತ್ನಗರ್ಭಗಣಪತಿ ಹಾಗು ದೇವಿಯ ವಿಗ್ರಹಗಳಿವೆ. ಗೋಪುರದ ಮೂಲಕ ಹೊರಬಂದರೆ ಒಂದು ದೊಡ್ಡ ಕೊಳವಿದೆ. ಇದನ್ನೇ ಮನ್ಮಥನ ಹೊಂಡ ಎಂದು ಕರೆಯುತ್ತಾರೆ. ದೇವರ ತೆಪ್ಪೋತ್ಸವವನ್ನು ಈ ಕೊಳದಲ್ಲಿ ನಡೆಸುತ್ತಾರೆ. ಇಲ್ಲಿಂದ ಮುಂದೆ ಸಾಗಿದರೆ ತುಂಗಭದ್ರಾನದಿಗೆ ಹೋಗಬಹುದು.

ದೇವಾಲಯದಿಂದ ಪಶ್ಚಿಮದಿಕ್ಕಿನತ್ತ ತೆರಳಿದರೆ ಶ್ರೀ ವಿದ್ಯಾರಣ್ಯರ ದೇವಾಲಯವಿದೆ. ಮಠವು ಸಹ ಇದೆ. ದಕ್ಷಿಣದತ್ತ ಹೊರಬಂದರೆ ಒಂದು ಕೊಳವಿದೆ. ಇದಕ್ಕೆ ಲೋಕಪಾವನತೀರ್ಥವೆಂದು ಹೆಸರು. ಇಲ್ಲಿಂದ ಹಿಂದಿರುಗಿ ಮಹಾದ್ವಾರದ ಮೂಲಕ ಹೊರಬಂದರೆ ಗೋಪುರದ ಎದುರಿಗೆ ಸುಮಾರು ೨ ಕಿಲೋಮಿಟರ್ ಉದ್ದದ ಹಂಪೆಯ ರಾಜಬೀದಿಯನ್ನು ಕಾಣಬಹುದು. ಬೀದಿಯತ್ತ ಸಾಗಿದರೆ ದೇವಾಲಯಕ್ಕೆ ಹತ್ತಿರದಲ್ಲೇ ಅಂಗಡಿಗಳು ಹೋಟಲುಗಳು ಉಂಟು. ಅಲ್ಲಿಂದ ಮುಂದೆ ಸಾಗಿದರೆ ಬೀದಿಯ ಇಕ್ಕೆಲದಲ್ಲೂ ಹಾಳುಬಿದ್ದಿರುವ ಬೃಹದಾಕಾರದ ಮಂಟಪಗಳನ್ನು ಕಾಣಬಹುದು. ಹಿಂದೊಮ್ಮೆ ರಾಜ ವೈಭವದಿಂದ ಮೆರೆದ ಈ ರಾಜಬೀದಿಯು ಇಂದು ರಾವುಗ್ರಸ್ಥವಾಗಿದೆ.

ಮುಂದೆ ಕಾಣುವುದೇ ಮಾತುಂಗಪರ್ವತ. ಈ ಪರ್ವತದ ಹತ್ತಿರ ಒಂದು ಸುಂದರವಾದ ೨ ಅಂತಸ್ತಿನ ಮಂಟಪವಿದೆ. ಈ ಮಂಟಪದ ಹತ್ತಿರವೆ ಒಂದು ಬೃಹದಾಕಾರದ ನಂದಿಯ ವಿಗ್ರಹವಿದೆ. ಇದು ಪಂಪಾದೇವಾಲಯಕ್ಕೆ ಎದುರಿಗಿರುವುದರಿಂದ ಇದಕ್ಕೆ ಇದಿರುಬಸವಣ್ಣ ಎಂದು ಕರೆಯುತ್ತಾರೆ.





## ಮಾತುಂಗಬೆಟ್ಟ :

ಈ ಬೆಟ್ಟದ ಮೇಲೆ ವೀರಭುವನೇಶ್ವರನ ಗುಡಿ ಇದೆ. ಇದು ಹೆಚ್ಚಿನ ಆಕರ್ಷಣೆಗಳಿಲ್ಲದೆ ಸಾಧಾರಣವಾಗಿದೆ. ಈ ಬೆಟ್ಟದ ಮೇಲೆ ನಿಂತುನೋಡಿದರೆ, ಪಂಪಾವತಿ ದೇವಾಲಯ, ರಥಬೀದಿ, ಹೇಮಕೂಟಪರ್ವತ, ತುಂಗಭದ್ರಾನದಿ, ಅಚ್ಯುತರಾಯನ ಗುಡಿ, ಗಜಶಾಲೆ, ಅರಮನೆಯ ಕೋಟೆ, ಇತರ ಭಿನ್ನ ಅವಶೇಷಗಳನ್ನು ನೋಡಬಹುದು. ಇಲ್ಲಿಂದ ಪ್ರಕೃತಿಯ ಸೊಬಗನ್ನು ನೋಡಲು ಬಹುರಮ್ಯ. ಸೂರ್ಯಉದಯ ಮತ್ತು ಸೂರ್ಯಾಸ್ತನೋಡಲು ಬಹು ಸೊಗಸು. ಇಡೀ ದಕ್ಷಿಣ ಹಿಂದೂಸ್ತಾನದಲ್ಲಿ ಇದಕ್ಕೆ ಮಿಗಿಲಾದ ನಯನ ಮನೋಹರ ಸುಂದರ ದೃಶ್ಯ ಇನ್ನೊಂದಿಲ್ಲ.

## ಕೋದಂಡರಾಮದೇವಾಲಯ :

ಬೆಟ್ಟವನ್ನಿಳಿದು ಮತ್ತೆ ರಥದ ಬೀದಿಗೆ ಬಂದರೆ ಕಾಲುದಾರಿ. ಅಲ್ಲಿಂದ ಸ್ವಲ್ಪ ದೂರ ಸಾಗಿದರೆ ಕೋದಂಡರಾಮದೇವಾಲಯ ಸಿಗುತ್ತದೆ. ಈ ದೇವಾಲಯವು ನದಿಯ ಮಧ್ಯದಿಂದ ಸುಮಾರು ೬೦--೭೦ ಅಡಿ ಎತ್ತರದಲ್ಲಿದೆ. ಈ ದೇವಾಲಯದ ಮುಂದೆ ನಿಂತು ನದಿಯ ರಮ್ಯ ನೋಟ ಕಾಣಬಹುದು. ನದಿಯಲ್ಲಿ ಭಾರಿ ಪ್ರವಾಹವು ಬಂದಾಗ ನೀರು ರಭಸದಲ್ಲಿ ಬೆಟ್ಟಕ್ಕೆ ತಾಗಿ ಸುತ್ತುತ್ತ ಮುಂದೆ ಸಾಗುತ್ತದೆ. ನದಿಯ ಈ ಭಾಗಕ್ಕೆ ಚಕ್ರತೀರ್ಥವೆಂದು ಹೆಸರು. ಒಂದೇ ಬಂಡೆಯಲ್ಲಿ ಶ್ರೀರಾಮ ಲಕ್ಷ್ಮಣ



ಸೀತೆಯುವರ ವಿಗ್ರಹಗಳನ್ನು ಕೆತ್ತಲಾಗಿದೆ. ಈ
ಹಗಳು ಸುಮಾರು ೫ ರಿಂದ ೯ ಅಡಿ ಎತ್ತರವಾ
ಈ ಮೂಲದೇವಾಲಯವನ್ನು ಅರವೀಡು ವಂ
ಚಿಕ್ಕವೆಂಕಟಪತಿರಾಯನು ಕಟ್ಟಿಸಿದನೆಂದು ತಿಳಿ
ಬರುತ್ತೆ.

## ಯಂತ್ರೋದ್ಧಾರ ಹನುಮಂತ :

ಇದು ಕೋದಂಡರಾಮದೇವಾಲಯದ
ದಿಯಲ್ಲಿ ಸ್ವಲ್ಪ ಎತ್ತರದಲ್ಲಿದೆ. ಈ ಮು
ಯನ್ನು ವ್ಯಾಸರಾಯರು ಶ್ರೀಕೃಷ್ಣದೇವರಾ
ಕಾಲದಲ್ಲಿ ಪ್ರತಿಷ್ಠಾಪಿಸಿದರೆಂದು ತಿಳಿದುಬ

ಈ ದೇವಾಲಯದ ಸಮೀಪದಲ್ಲೇ ಅನಂತಶಯನ ಗುಡಿ, ರಂಗನಾಥನಗುಡಿ ಇವೆ. ಮುಂದೆ ಸ್ವಲ್ಪ ನಡೆದರೆ ಅಚ್ಯುತರಾಯನಗುಡಿ, ಈ ದೇವಾಲಯದ ಎದುರಿಗೆ ೨ ಕಡೆಯೂ ಸಾಲುಮಂಟಪಗಳಿವೆ. ಹಿಂದೆ ಈ ಜಾಗದಲ್ಲಿ ರತ್ನ ಮುತ್ತುಗಳ ವ್ಯಾಪಾರ ನಡೆಯುತ್ತಿತೆಂದು ತಿಳಿದುಬಂದಿದೆ. ಇದಕ್ಕೆ "ಸೂಳೆ ಬಜಾರ್" ಎಂದು ಹೇಳುತ್ತಾರೆ.

## ಅಚ್ಯುತರಾಯನ ಗುಡಿ:

ಈ ದೇವಾಲಯ ೧೫೩೩ ಹಾಗೂ ೧೫೪೨ ರ ನಡುವೆ ಕೃಷ್ಣದೇವರಾಯನ ತಮ್ಮನಾದ ಅಚ್ಯುತರಾಯನಿಂದ ಕಟ್ಟಿಸಲ್ಪಟ್ಟಿತು. ಈ ದೇವಾಲಯದ ಬಾಗಿಲುವಾಡದ ಸ್ಥಂಬ ಪೀಠದ ಮೇಲೆ ಮತ್ತು ಅದರ ಪಕ್ಕಗಳಲ್ಲಿ ಸೂಕ್ಷ್ಮವಾದ ಕೆತ್ತನೆಯ ದಶಾವತಾರಗಳನ್ನು ಬಿಡಿಸಲಾಗಿದೆ. ಮಂಟಪದ ಪೀಠದ ಮೇಲೆ ಆನೆಗಳು, ಕುದುರೆಗಳು ಅರಬ್ ವರ್ತಕರು ಮತ್ತು ಇತರ ಪರದೇಶೀಯರ ಚಿತ್ರಗಳನ್ನು ಮುದ್ದಾಗಿ ವಾಸ್ತವತೆಯಿಂದ ಕೂಡಿರುವಂತೆ ಬಿಡಿಸಲಾಗಿದೆ. ಈ ದೇವಾಲಯದ ದಕ್ಷಿಣಬಾಗಿಲಿನಿಂದ ಹೊರಬಂದರೆ ಸಕಲಾಯುಧ ಪಾಣಿಯಾದ ಹತ್ತು ಕೈಗಳುಳ್ಳ ಒಂದೇ ಶಿಲೆಯಿಂದ ನಿರ್ಮಿಸಲ್ಪಟ್ಟ ದೇವಿ ವಿಗ್ರಹವಿದೆ. ಅಚ್ಯುತರಾಯನ ದೇವಾಲಯದ ಹಿಂಬದಿಯಲ್ಲಿ ಬಲಬಾಗದಲ್ಲಿ ಎತ್ತರದಲ್ಲಿ ಒಂದು ಮಂದಿರ ಕಂಡುಬರುತ್ತದೆ. ಇದೇ ನರಸಿಂಹಮಂದಿರ. ಇಲ್ಲಿ ಗರುಡ ಮತ್ತು ಆಂಜನೇಯ ಮೂರ್ತಿಗಳಿವೆ. ಮುಂದೆ ಸಾಗಿದಲ್ಲಿ ಎಡಭಾಗದಲ್ಲಿ ಪುರಂದರ ಮಂಟಪವಿದೆ.

## ಪುರಂದರ ಮಂಟಪ :

ಸುಮಾರು ೧೫೫೦ ರ ಸಮಯದಲ್ಲಿ ಪುರಂದರ ದಾಸರು ವಿಜಯನಗರ ಸಾಮ್ರಾಜ್ಯದಲ್ಲಿದ್ದು ತಮ್ಮ ಭಕ್ತಿ ಗೀತೆಗಳ ಮೂಲಕ ಭಕ್ತಿ ಪ್ರಸಾರದೊಂದಿಗೆ ಕನ್ನಡ ಪ್ರಚಾರ ಸಹ ಕೈಗೊಂಡಿದ್ದರು. ಇವರ ಹೆಸರಿನಲ್ಲಿರುವ ಮಂಟಪವು ತುಂಗಭದ್ರೆಯ ದಡದ ಪ್ರಶಾಂತ ವಾತಾವರಣದಲ್ಲಿದೆ. ಮಳೆಗಾಲದಲ್ಲಿ ಭಾರಿಪ್ರವಾಹ ಬಂದು ಈ ಮಂಟಪವು ಮುಳುಗಿದರೂ ಮಂಟಪಕ್ಕೆ ಯಾವರೀತಿ ಹಾನಿಯು ಆಗದಂತೆ ನೂರಾರು ಕಂಬಗಳಿಂದ ನಿರ್ಮಿಸಲಾಗಿದೆ. ಈ ಮಂಟಪದಲ್ಲಿ ಪುರಂದರ ವಿಗ್ರಹ ಇದೆ.

## ಅರಸನ ತುಲಾಭಾರ :

ಪುರಂದರ ಮಂಟಪದಿಂದ ಮೇಲೆ ಹತ್ತಿಬಂದು ಪೂರ್ವದಿಕ್ಕಿಗೆ ಹೊರಟರೆ ಬೃಹದಾಕಾರದ ಕಲ್ಲು ಕಂಬಗಳೆರಡು ಕಂಡುಬರುತ್ತದೆ. ಇದನ್ನೇ ಅರಸನ



ತುಲಾಭಾರ ಎಂದು ಕರೆಯುತ್ತಾರೆ. ಹಿಂದೆ ದಸರಾ ಹಬ್ಬದ ನವಮಿಯಂದು ಈ ಚೌಕಟ್ಟಿಗೆ ತಕ್ಕಡಿಯನ್ನು ಕಟ್ಟಿ ಒಂದು ಭಾಗದಲ್ಲಿ ಅರಸನು ಕುಳಿತು ಮತ್ತೊಂದು ಭಾಗಕ್ಕೆ ಅವನ ತೂಕಕ್ಕೆ ಸರಿಯಾಗಿ ವಜ್ರವೈಢೂರ್ಯಗಳನ್ನು ತೂಗಿ ಅದನ್ನು ಬಡಬಗ್ಗರಿಗೆ ದಾನಮಾಡುತ್ತಿದ್ದರಂತೆ.

## ವಿಜಯವಿಠಲನ ಗುಡಿ:

ವಾಸ್ತುಶಿಲ್ಪದ ಶ್ರೇಷ್ಠತೆಗೆ ಸೇರಿದ ಮೂರು ದೇವಾಲಯಗಳು ಹಂಪೆಯಲ್ಲಿವೆ. ಇವರ ಕಲಾತ್ಮಕವಾದ ಮುಂಭಾಗವನ್ನು ಮತ್ತು ಕಲ್ಯಾಣಮಂಟಪವನ್ನು ಕೃಷ್ಣದೇವರಾಯನು ತನ್ನ ದಿಗ್ವಿಜಯದ ನಂತರ ೧೫೧೩ ರಲ್ಲಿ ಕಟ್ಟಿಸಿದನು. ಇವು ತಂಜಾವೂರಿನ ಬೃಹದೀಶ್ವರ ದೇವಾಲಯ ಅಥವಾ ಪಟ್ಟದ ಕಲ್ಲಿನ ವಿಶ್ವೇಶ್ವರ ದೇವಾಲಯಗಳಲ್ಲಿನ ಹೊರ ಅಲಂಕಾರಗಳನ್ನು ನೆನಪಿಗೆ ತರುತ್ತವೆ.

ವಿಠಲದೇವಾಲಯದ ಎದುರಿಗೆ ಜಗದ್ವಿಖ್ಯಾತ ಶಿಲಾರಥವಿದೆ. ಇದು ಒರಿಸ್ಸಾದ ಕೋನಾರ್ಕದ ಸೂರ್ಯದೇವಾಲಯದಂತೆ ಕಾಣುತ್ತೆ. ಈ ರಥವನ್ನು ಒರಟು ದೆಣಚುಕಲ್ಲಿನಿಂದ ನಿರ್ಮಿಸಲಾಗಿದೆ.

ವಿಠಲ ದೇವಾಲಯದ ದಕ್ಷಿಣಭಾಗದಲ್ಲಿ ಒಂದು ಸುಂದರವಾದ ಕಲ್ಯಾಣಮಂಟಪವಿದೆ. ಇದನ್ನು





ಕೃಷ್ಣದೇವರಾಯನು ೧೫೧೩ ರಲ್ಲಿ ಕಟ್ಟಿಸಿದನು. ಇದಕ್ಕೆ ೧೦೦ ಕಾಲು ಮಂಟಪವೆಂದು ಹೆಸರು.

## ಹೇಮಕೂಟ :

ವಿರೂಪಾಕ್ಷೇಶ್ವರದೇವಾಲಯಕ್ಕೆ ದಕ್ಷಿಣದಿಕ್ಕಿನತ್ತ ಸಾಗಿದರೆ ಸಿಗುವುದು ಹೇಮಕೂಟ. ಇಲ್ಲೂ ಅನೇಕ ದೇವಾಲಯಗಳಿವೆ. ಹೇಮಕೂಟಕ್ಕೆ ಪೂರ್ವಕ್ಕೆ ಕಂಡುಬರುವುದೆ ರತ್ನಗಿರಿ. ಇಲ್ಲಿ ಅನೇಕ ದೇವಾಲಯಗಳಿವೆ. ಇಲ್ಲೊಂದು ಜೈನರ ಆಶ್ರಮ ಸಹ ಇರುವುದು. ಹೇಮಕೂಟದಿಂದ ಪೂರ್ವಕ್ಕೆ ತಿರುಗಿದರೆ ದೊಡ್ಡ ದೇವಾಲಯ ಒಂದು ಕಾಣಿಸುವುದು. ಇದೇ ಕಡ್ಲೆಕಾಳು ಗಣಪತಿದೇವಾಲಯ.

## ಕಡ್ಲೇಕಾಳು ಗಣಪತಿ :

ಈ ಬೃಹದಾಕಾರದ ಮೂರ್ತಿಗೆ ಭವ್ಯವಾದ ಗರ್ಭಗೃಹವಿದೆ. ಈ ಮೂರ್ತಿ ೧೮ ಅಡಿ ಎತ್ತರವಿದ್ದು ಏಕಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯದ ಬಲಬದಿಗೆ ಸ್ವಲ್ಪ ಹಿಂಬಾಗದಲ್ಲಿ ಮತ್ತೊಂದು ಗಣಪನ ಮಂಟಪವಿದೆ. ಈ ಗಣಪತಿಗೆ ಸಾಸಿವೆ ಕಾಳು ಗಣಪನೆಂದು ಕರೆಯುತ್ತಾರೆ. ಈ ಗಣಪನಿಗೆ ಗರ್ಭಗೃಹವಿಲ್ಲ. ತೆರೆದ ಮಂಟಪದಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿ ಸುಮಾರು ೧೨ ಅಡಿ ಎತ್ತರ ಏಕಶಿಲೆಯಿಂದ ನಿರ್ಮಿಸಲ್ಪಟ್ಟಿವೆ.

## ಕೃಷ್ಣದೇವಾಲಯ :

ಹಂಪೆಯ ಪ್ರವೇಶದ್ವಾರದ ಮೂಲಕ ಮುಂದೆ ಹೊರಟರೆ ಬಲಬದಿಗೆ ಒಂದು ವಿಶಾಲವಾದ ದೇವಾಲಯವು ೩.೨೦ ಅಡಿ ಉದ್ದವಾಗಿಯೂ ೨೦೦ ಅಡಿ ಅಗಲ ಇವೆ. ಈ ದೇವಾಲಯವು ಸುಭದ್ರವಾಗಿದೆ. ದೇವಾಲಯಕ್ಕೆ ಕೋಟೆ ರಕ್ಷಣೆಯೂ ಇದೆ. ಈ ದೇವಾಲಯವು ಗಜಪತಿಯೊಂದಿಗೆ ಯುದ್ಧಮಾಡಿಗಳಿಸಿದ ಸವಿನೆನಪಿನ ಕಾಣಿಕೆಯಾಗಿ ೧೫೨೮ ರಲ್ಲಿ ಬಾಲಕೃಷ್ಣನ ವಿಗ್ರಹವನ್ನು ಉದಯಗಿರಿಯಿಂದ ತಿರಿಸಿ, ಪ್ರತಿಷ್ಠಾಪಿಸಿದನು. ಆದರೆ ಆ ಮೂರ್ತಿ ಈಗ ಅಲ್ಲಿಲ್ಲ. ಅದನ್ನು ಮದರಾಸು ಮ್ಯೂಜಿಯಂನಲ್ಲಿಡಲಾಗಿದೆ. ದೇವಾಲಯದ ರಂಗ ಮಂಟಪವು ವಿಶಾಲವಾಗಿ ಸುಂದರವಾಗಿದೆ. ಕಂಬಗಳಲ್ಲಿ ಕೃಷ್ಣನ ಜೀವನಚರಿತ್ರೆಯ ಅನೇಕ ಕೆತ್ತನೆಗಳನ್ನು ಕಾಣಬಹುದು. ಕೆತ್ತನೆಯು ಅಪೂರ್ವವಾಗಿದೆ. ದೇವಾಲಯದ ಮಹಾದ್ವಾರದ ಮೂಲಕ ಹೊರಬಂದರೆ ವಿಸ್ತಾರವಾದ ಮುಖ್ಯ ಬೀದಿ ಯುಂಟು. ಇದು ರಥದ ಬೀದಿಯಾಗಿರಬಹುದು. ಹೊರ ಆವರಣದಲ್ಲಿ ಬೃಹದಾಕಾರದ ಒಂದು ಕಲ್ಲಿನ ದೋಣಿಯುಂಟು. ಇದರ ಬಗ್ಗೆ ಒಬ್ಬೊಬ್ಬರು ಒಂದೊಂದು ರೀತಿಯದಂತ ಕತೆಗಳನ್ನು ಹೇಳುತ್ತಾರೆ. ಈ ರಸ್ತೆ ಹಿಡಿದು ಕೆಲವು ಗಜ ದೂರಹೋದರೆ ಒಂದು ಮಂಟಪ ಕಂಡುಬರುವುದು. ಈ ಮಂಟಪದಲ್ಲಿ ಒಂದು ಲಿಂಗವಿರುವುದು.

## ಬಡವಿಲಿಂಗ :

ಈ ಲಿಂಗಕ್ಕೆ ಈ ಹೆಸರು ಬರಲು ಕಾರಣಗೊತ್ತಿಲ್ಲ. ಹಂಪಿಯಲ್ಲಿರುವ ಎಲ್ಲಾ ಲಿಂಗಗಳಿಗಿಂತಲೂ ಇದು ಅತ್ಯಂತ ಭಾರಿಯಾದುದು. ಅತ್ಯಂತ ಸುಂದರವಾದ ಲಿಂಗ. ಕರಿಯ ಕಲ್ಲಿನಿಂದ ನಿರ್ಮಿಸಲಾಗಿದೆ. ಇದರ ಎತ್ತರ ಸುಮಾರು ೧೨ ಅಡಿಗಳು. ಇದಕ್ಕೆ ಗರ್ಭಗುಡಿ ಉಂಟು. ಗೋಡೆಯ ಮೇಲೆ ಮುಚ್ಚಳಿಕೆಯಿಲ್ಲ. ವ್ಯವಸಾಯದ ಕಾಲುವೆಯೊಂದು ಈ ಗುಡಿಯ ಮುಖಾಂತರ ಹೋಗುವುದರಿಂದ ಲಿಂಗವು ೩ ಅಡಿ ನೀರಿನಲ್ಲಿ ಮುಳುಗಿರುತ್ತದೆ. ಈ ಲಿಂಗದ ಪಕ್ಕದಲ್ಲಿ ಉಗ್ರನರಸಿಂಹನ ವಿಗ್ರಹವಿದೆ.

## ಉಗ್ರನರಸಿಂಹ :

ಇದು ಹಂಪೆಯಲ್ಲಿರುವ ಎಲ್ಲಾ ಮೂರ್ತಿಗಳಿಗಿಂತ ಬೃಹದಾಕಾರ ಮೂರ್ತಿ. ಇದರ ಎತ್ತರ ಸುಮಾರು ೨೨ ಅಡಿಗಳು. ಇದು ೧೫೨೮ ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಓರ್ವ ಬ್ರಾಹ್ಮಣನಿಂದ ನಿರ್ಮಿಸಲ್ಪಟ್ಟಿತು. ಇದು ಉಗ್ರನರಸಿಂಹನಲ್ಲಹೇಗೆಂದರೆ ತೊಡೆಯ ಮೇಲೆ ಲಕ್ಷ್ಮಿಯ ವಿಗ್ರಹವಿದ್ದು ಪುಂಡರದಾಳಿಗೆ ತುತ್ತಾಗಿ ಭಿನ್ನವಾಗಿ ಬಿದ್ದಿದೆ. ಹೀಗೆ ಲಕ್ಷ್ಮಿಯೊಂದಿಗೆ ಇದ್ದುದರಿಂದ ಲಕ್ಷ್ಮೀನರಸಿಂಹನೆಂದು ಕರಿಯಬಹುದು. ನರಸಿಂಹನ ಹಿಂದೆ ಬೃಹದಾಕಾರದ ಪ್ರಭಾವಳಿ ತಲೆಯ ಹಿಂದೆ ಹೆಡೆ ಬಿಚ್ಚಿದ ಸರ್ಪವಿದ್ದು ವಿಗ್ರಹದ ಅನೇಕ ಭಾಗಗಳು ಭಿನ್ನವಾಗಿದೆ. ಆದರೆ ಈಗ ಬಯಲಿನಲ್ಲಿದೆ.

## ವೀರಭದ್ರ ದೇವಾಲಯ :

ಇದು ಅರವೀಡುವಂಶದ ರಾಮರಾಯನ ಕಾಲದಲ್ಲಿ ನಿರ್ಮಾಣಗೊಂಡಿದೆ. ವಿಗ್ರಹವು ೧೨ ಅಡಿ ಎತ್ತರವಾಗಿದ್ದು ಕೈಲಿ ಆಯುಧಗಳು ಹಿಡಿದು ನಿಂತಿದೆ. ಇದರ ಪಕ್ಕದಲ್ಲಿ ದಕ್ಷನ ವಿಗ್ರಹವು ಇವೆ. ಇದರ ಹತ್ತಿರವೆ ಚಂಡಿಕೇಶ್ವರದೇವಾಲಯವು ಇವೆ. ಮುಂದೆ ಸಾಗಿದರೆ ಆಂಜನೇಯ ದೇವಾಲಯ ಪಾತಾಳೇಶ್ವರದೇವಾಲಯವು ಕಂಡುಬರುತ್ತದೆ.

## ಪಾತಾಳೇಶ್ವರದೇವಾಲಯ :

ಇದು ಭೂಮಟ್ಟದಿಂದ ಕೆಳಗಿರುವುದು. ಈ ದೇವಾಲಯ ನಿರ್ಮಾಣವು ಬುಕ್ಕರಾಯನ ಕಾಲದ್ದಾಗಿರಬಹುದೆಂದು ಊಹಿಸಬಹುದು. ಗರ್ಭಗುಡಿಯಲ್ಲಿ ಈಶ್ವರ ಲಿಂಗವಿದೆ. ಎದುರಿಗೆ ನಂದಿ ವಿಗ್ರಹವು ಇದೆ. ದೇವಾಲಯದ ಒಳಭಾಗದಲ್ಲಿ ಕಾಲುವೆಯ ನೀರು ಹರಿಯುತ್ತದೆ. ಸದಾಕಾಲ ತಂಪಾಗಿರುತ್ತದೆ. ಇದನ್ನು ಪ್ರಸನ್ನ ವಿರೂಪಾಕ್ಷದೇವಾಲಯವೆಂದು ಕರೆಯುತ್ತಾರೆ.

## ಹಜಾರರಾಮನ ದೇವಾಲಯ :

ಇದು ಅರಮನೆಗೆ ಹೊಂದಿಕೊಂಡಂತೆ ಇದನ್ನು ಕೃಷ್ಣದೇವರಾಯನ ದಿಗ್ವಿಜಯದ ಜ್ಞಾಪಕಾರ್ಥವಾಗಿ ೧೫೧೩ ರಲ್ಲಿ ನಿರ್ಮಿಸಲಾಯಿತು. ಅರಮನೆಯ ಆವರಣದಲ್ಲಿರುವ ಈ ದೇವಾಲಯ ರಾಜಮನೆತನದವರ ದಿನ ನಿತ್ಯ ಪೂಜೆಗೆ ನಿರ್ಮಾಣಗೊಂಡಿದ್ದು ನಾಟಕಪ್ರದರ್ಶನ ಶಾಲೆಯೂ ಆಗಿತ್ತಂತೆ. ಈ ದೇವಾಲಯದಲ್ಲಿ ಗೋಡೆಗಳ ಮೇಲೆ ಚಿತ್ರಪಟಗಳ ಸಾಲುಗಳು ಹೇರಳವಾಗಿವೆ. ಚಿತ್ರಗಳು ಬೇಲೂರು, ಹಳೆಬೀಡು ದೇವಾಲಯಗಳಲ್ಲಿ ಉಪಯೋಗಿಸಿರುವಂತೆ ಬಳಪ

ಲ್ಲನ್ನು ಉಪಯೋಗಿಸಲಾಗಿದೆ. ಗೋಡೆಗಳ ಮೇಲೆ ದಶಾವತಾರದ ವಿಗ್ರಗಳು, ವೈಷ್ಣವರ ದೇವಾನುದೇವತೆಗಳ ವಿಗ್ರಹಗಳನ್ನು ಬಿಡಿಸಿರುತ್ತಾರೆ. ಶ್ರೀಕೃಷ್ಣದೇವರಾಯನಿಗೆ ವೈಷ್ಣವ ಧರ್ಮದ ಬಗೆಗಿದ್ದ ಅಭಿಮಾನದ ಕುರುಹುಗಳಾಗಿವೆ. ಹನುಮಾನ್, ಜಾಂಬವಂತ, ವೇಣುಗೋಪಾಲ ಮೂರ್ತಿಗಳನ್ನು ಸಹ ಕೆತ್ತಲಾಗಿದೆ. ಇವುಗಳ ಹತ್ತಿರವೆ ಸಣ್ಣದಾದ ಒಂದು ಗುಡಿಯಿದೆ. ಅದನ್ನು ಪಟ್ಟಣದ ಯಲ್ಲಮ್ಮ ಎಂದು ಕರೆಯುತ್ತಾರೆ. ಈ ದೇವಾಲಯದ ಮುಂದೆ ಒಂದು ಆಳವಾದ ಬಾವಿಯಿದೆ. ಮಹಾನವಮಿ ದಿನದಂದು ಇದರಲ್ಲಿ ಕುರಿಕೋಣಗಳನ್ನು ಬಲಿಕೊಡುತ್ತಿದ್ದರಂತೆ. ಪಾಯಸ್ ಹೇಳುವಂತೆ ೫೨೦ ಕೋಣಗಳನ್ನು ೪೫೦೦ ಕುರಿಗಳನ್ನು ಬಲಿಕೊಡುತ್ತಿದ್ದರಂತೆ.

## ಮಹಾನವಮಿಯ ದಿಬ್ಬ :

ಇದೊಂದು ವಿಶಾಲವಾದ ಕಲ್ಲಿನ ವೇದಿಕೆ. ಕೃಷ್ಣದೇವರಾಯನು ಒರಿಸ್ಸಾವನ್ನು ಗೆದ್ದನಂತರ ಅದರ ಸವಿನೆನಪಿಗಾಗಿ ಇದನ್ನು ಕಟ್ಟಿಸಿದನಂತೆ. ಈ ವೇದಿಕೆಯು ಹಜಾರ ರಾಮಸ್ವಾಮಿ ದೇವಾಲಯದಂತೆ ಅನೇಕ ಕೆತ್ತನೆ ಹಂತಗಳಿಂದ ಕೂಡಿದೆ. ಈ ವೇದಿಕೆಯ ಮತ್ತೊಂದು ಭಾಗದಲ್ಲಿ ಹೋಳಿಹಬ್ಬದ ದೃಶ್ಯವು ಕಾಣಬರುತ್ತದೆ. ಈ ದಿಬ್ಬದ ಮೇಲೆ ಅಲಂಕೃತವಾದ ಮಂಟಪ ಕಟ್ಟಿಸಿ ಪೂಜೆ ದರ್ಬಾರು, ನಾನಾ ಪಂದ್ಯಗಳು ಮುಂತಾದ ಕಾರ್ಯಕ್ರಮವನ್ನು ಸಂಭ್ರಮದಿಂದ ಆಚರಿಸುತ್ತಿದ್ದರಂತೆ.

ಈ ದಿಬ್ಬದ ಹತ್ತಿರ ಒಂದು ಬಾವಿ ಇದೆ. ಹಿಂದೆ ದಸರಾ ಸಮಾರಂಬಕ್ಕೆ ಭಾಗವಹಿಸಲು ಬರುತ್ತಿದ್ದ ಸಾಮಂತರುಗಳ ಆನೆ, ಕುದುರೆಗಳು ಕುಡಿಯುವ ನೀರಿನ ವ್ಯವಸ್ಥೆಗಾಗಿ ಇದನ್ನು ನಿರ್ಮಿಸಿದರಂತೆ. ಈ ದಿಬ್ಬದ ಪಕ್ಕದಲ್ಲಿ ಒಂದು ನೆಲ ಮಾಳಿಗೆ ಇದೆ. ಇದು ರಹಸ್ಯ ಮಂದಿರವೆಂದು ಕರೆಯುತ್ತಾರೆ. ಇದರ ಹತ್ತಿರವೆ ಒಂದು ತೊಟ್ಟಿ ಇದೆ. ಇದು ಈಜುಭಾವಿ ಇದ್ದಿರಬಹುದೆಂದು ಕಾಣುತ್ತೆ.

## ಕರೆಕಲ್ಲಿನ ಕಲ್ಯಾಣಿ :

ಇದನ್ನು ಹೊಸದಾಗಿ ಕಂಡುಹಿಡಿದಿದ್ದಾರೆ. ಇದು ಪೂರ್ತಿ ಕರಿಕಲ್ಲಿನಿಂದ ಮಾಡಿದ್ದು. ಇದರ ಆಕಾರ ಬಹಳ ಸುಂದರ. ಪ್ರಾಚ್ಯವಸ್ತು ಸಂಶೋದಕರಿಂದ ಬಹಳ ಶ್ರಮದಿಂದ ಶೋದಿಸಿ ಮಣ್ಣಿನ ದಿಬ್ಬದ ಅಡಿಯಲ್ಲಿ ಈ ಕಲ್ಯಾಣಿಯನ್ನು ಕಂಡುಹಿಡಿದಿದ್ದಾರೆ. ಪ್ರತಿಯೊಬ್ಬ ಪ್ರವಾಸಿಕನು ನೋಡಲೇಬೇಕಾದದ್ದು.

## ಕಮಲಮಹಲ್ :

ಇದು ಮಹಾನವಮಿ ದಿಬ್ಬದಿಂದ ಉತ್ತರದ ಕಡೆಗೆ ಇದೆ. ಇದನ್ನು ಲೋಟಸ್ ಮಹಲ್ ಎಂತಲೂ ಚಿತ್ರಾಂಗಿಣಿ ಮಹಲ್ ಎಂತಲೂ ಕರೆಯುತ್ತಾರೆ. ಇದು ಹಿಂದೂಮುಸಲ್ಮಾನರ ಎರಡು ಶೈಲಿಗಳನ್ನು ಒಳಗೊಂಡಿದೆ. ಗಾರೆಯಿಂದಲೇ ನಿರ್ಮಿಸಲ್ಪಟ್ಟು ಎರಡು ಅಂತಸ್ತುಗಳನ್ನು ಹೊಂದಿದೆ. ಮೇಲಿನ ಅಂತಸ್ತಿಗೆ ಹತ್ತಲು ಮೆಟ್ಟಲುಗಳಿವೆ. ಮೇಲಿನ ಅಂತಸ್ತಿನಲ್ಲಿ ನಿಂತು ನೋಡಿದರೆ ಪ್ರಕೃತಿ ಸೌಂದರ್ಯ ಸೊಗಸಾಗಿ ಕಾಣುತ್ತೆ. ಬೇಸಿಗೆಯಲ್ಲಿ ಹವ ತಂಪಾಗಿರುತ್ತದೆ. ಇದು ರಾಣಿಯರ ವಿಶ್ರಾಂತಿ ಗೃಹವಾಗಿರಬಹುದೆಂದು ತೋರುತ್ತದೆ.

## ಗಜಶಾಲೆ :

ಇದು ಅರಸನ ಪಟ್ಟದಾನೆಗಳನ್ನು ಕಟ್ಟಲು ನಿರ್ಮಿಸಿದ ಒಂದು ಕಟ್ಟಡ. ಇದು ೧೧ ಕೊಟ್ಟಡಿಗಳನ್ನೊಳಗೊಂಡಿದೆ. ಈ ಕಟ್ಟಡವು ಇಂದಿಗೂ ಅಚ್ಚಳಿಯಿದೇ ಸುಭದ್ರವಾಗಿದೆ. ಇದರಿಂದ ಪೂರ್ವಕ್ಕೆ ಹೊರಟರೆ ವಿಷ್ಣುವಿನ ಗುಡಿಯೊಂದು ಸಿಗುತ್ತದೆ. ಇದನ್ನು ಸರಸ್ವತಿ ದೇವಾಲಯವೆಂದು ಕರೆಯುತ್ತಾರೆ. ಇದರ ಮುಂದೆ ಒಂದು ಕಟ್ಟಡವಿದೆ. ಇದೇ ರಾಣಿಯರ ಸ್ನಾನಗೃಹ.

## ರಾಣಿಯರ ಸ್ನಾನಗೃಹ :

ಇದು ಗಚ್ಚುಗಾರೆಯಿಂದ ಹಿಂದೂ ಹಾಗೂ ಮುಸಲ್ಮಾನರ ಶೈಲಿಯಿಂದ ನಿರ್ಮಿಸಲ್ಪಟ್ಟಿದೆ. ಸುಂದರ ಕಟ್ಟಡ ಮೇಲೆ ಉಪ್ಪರಿಗೆ ಇದೆ. ಕಟ್ಟಡದ ನಡುಭಾಗದಲ್ಲಿ ಸ್ನಾನಮಾಡಲು ಈಜುಗೊಳವನ್ನು ನಿರ್ಮಿಸಲಾಗಿದೆ. ಇದರ ಪಕ್ಕದಲ್ಲೇ ಭೋಜನಶಾಲೆಯಿದೆ.

## ಗಾಣಗಿತ್ತಿ ಮಹಲ್ :

ಗಾಣಗಿತ್ತಿ ದೇವಾಲಯವೆಂದೂ ಕರೆಯುತ್ತಾರೆ. ಈ ದೇವಾಲಯವನ್ನು ಹರಿಹರರಾಯನ ಕಾಲದಲ್ಲಿ ಕಟ್ಟಿಸಿದೆನೆಂದು ತಿಳಿದುಬರುತ್ತೆ. ಇಲ್ಲಿಂದ ಮುಂದೆ ಸಾಗಿದರೆ ಪಾಳುಬಿದ್ದ ದೇವಾಲಯಗಳು, ಮುಸಲ್ಮಾನರ ಗೋರಿಗಳು ಕಂಡುಬರುವುವು. ಇದು ರಾಮರಾಯನ ಕಾಲದಲ್ಲಿ ಮುಸಲ್ಮಾನರಿಗೆ ಬಿಟ್ಟ ಪ್ರತ್ಯೇಕಸ್ಥಳ. ಇದನ್ನು ಕುರ್ಕಿಮಹಲ್ ಎಂದು ಕರೆಯುತ್ತಾರೆ.

## ಮಾಲ್ಯವಂತ -- ರಘುನಾಥ :

ಮುಂದೆ ಸಾಗಿದರೆ ಒಂದು ದೆಟ್ಟವು ಕಾಣಿಸುವುದು. ಇದೇ ಮಾಲ್ಯವಂತದೆಟ್ಟ. ಇದರ ಮೇಲಿರುವುದೇ ರಘುನಾಥ ದೇವಾಲಯ. ಈ ದೇವಾಲಯದ ರಚನೆ ವಿನ್ಯಾಸ ಅಮೋಘವಾದದ್ದು. ಗರ್ಭಗುಡಿಯಲ್ಲಿ ರಾಮ, ಲಕ್ಷ್ಮಣ, ಸೀತೆ ಆಂಜನೇಯನ ವಿಗ್ರಹಗಳಿವೆ. ಇದರ ಹಿಂಬಾಗದಲ್ಲಿ ಶೈವ ದೇವಾಲಯವು ಇದೆ.

## ಆನೆಗೊಂದಿ :

ತುಂಗಭದ್ರಾನದಿಯನ್ನು ದಾಟಿ ಆಚೆಸಾಗಿದರೆ ಆನೆಗೊಂದಿ ತಲುಪುತ್ತೇವೆ. ಇದು ಈಗ ಚಿಕ್ಕಹಳ್ಳಿಯಾಗಿದೆ. ಇದೆ ಹಿಂದೆ ವಿಜಯನಗರ ಸಾಮ್ರಾಜ್ಯಕ್ಕೆ ಬುನಾದಿ.

ಇದಕ್ಕೆ ೧ ಮೈಲು ದೂರದಲ್ಲಿ ರಂಗನಾಥನ ಗುಡಿ, ಆಂಜನೇಯನ ದೆಟ್ಟ, ಜಗತ್ಪ್ರಸಿದ್ಧವಾದ ಪಂಪಾ ಸರೋವರ, ಶಬರಿ ಆಶ್ರಮ ಇದೆ. ಇಲ್ಲಿಂದ ಸುಮಾರು ಅರ್ಧ ಮೈಲಿ ದೂರದಲ್ಲಿ ತುಂಗಭದ್ರಾನದಿಯ ನಡುಭಾಗದಲ್ಲಿ ಮಾದ್ವರಿಗೆ ಪವಿತ್ರವಾದ ಯತಿಗಳ ಸಮಾಧಿಗಳುಂಟು. ಇದಕ್ಕೆ ನವಬೃಂದಾವನವೆಂದು ಹೆಸರು. ವಿಜಯನಗರದ ಜನಪ್ರಿಯ ಚಕ್ರವರ್ತಿಯಾದ ಕೃಷ್ಣದೇವರಾಯನ ಸಮಾಧಿಯು ಇಲ್ಲಿದೆ.

## ವಸ್ತುಸಂಗ್ರಹಾಲಯ :

ಹಿಂದಿನಕಾಲದ ನಾಣ್ಯಗಳನ್ನು ಸಂಗ್ರಹಿಸಿಡಲಾಗಿದೆ.

## ಮಲ್ಲಪ್ಪನ ಗುಡಿ :

ಇದೊಂದು ಹಳ್ಳಿ ಇಲ್ಲಿ ಮಲ್ಲಿಕಾರ್ಜುನಸ್ವಾಮಿ ದೇವಾಲಯವಿದೆ.

## ಅನಂತಶಯನ ಗುಡಿ :

ಹೊಸಪೇಟೆಗೆ ಹತ್ತಿರದಲ್ಲಿ ಅನಂತಶಯನ ಗುಡಿ ಎಂಬ ಹಳ್ಳಿ ಸಿಗುತ್ತದೆ. ಈ ಹಳ್ಳಿಗೆ ದೇವರ ಹೆಸರನ್ನೇ ಇಡಲಾಗಿದೆ. ಈ ದೇವಾಲಯವನ್ನು ೧೫೧೮ ರಲ್ಲಿ ಕೃಷ್ಣದೇವರಾಯನು ಕಟ್ಟಿಸಿದನು. ಈ ಕಟ್ಟಡವು ಇಂದಿಗೂ ಅಚ್ಚಳಿಯದೇ ಸುಭದ್ರವಾಗಿದೆ. ಇದು ಕಲ್ಲು ಮತ್ತು ಅರೆದಗಾರೆಯಿಂದ ನಿರ್ಮಿಸಲ್ಪಿಟ್ಟಿದೆ.

## ತುಂಗಭದ್ರ ಆಣೆಕಟ್ಟು :

ಇದು ಹೊಸಪೇಟೆಯಿಂದ ೩ ಮೈಲಿ ದೂರದಲ್ಲಿದೆ. ಹೊಸಪೇಟೆಯನ್ನು ಕೃಷ್ಣದೇವರಾಯನು ತನ್ನಪತ್ನಿ ತಿರುಮಲ ದೇವಿಯ ಸ್ಮಾರಕಾರ್ಥವಾಗಿ ಕಟ್ಟಿಸಿದನು. ಇದಕ್ಕೆ ಮೊದಲು ತಿರುಮಲದೇವಿ ಪಟ್ಟಣವೆಂದು, ಅನಂತರ ಹೊಸಪಟ್ಟಣವೆಂತಲೂ ಈಗ ಹೊಸಪೇಟೆಯಾಗಿದೆ.

ಇಲ್ಲಿಂದ ತುಂಗಭದ್ರ ಆಣೆಕಟ್ಟಿಗೆ ಹೋಗಲು ಬಸ್ಸುಗಳು ಸದಾ ಸಿಗುತ್ತದೆ. ಇಲ್ಲಿ ಅಂಗಡಿ ಹೋಟಲ್‌ಗಳು ಎಲ್ಲಾ ಇರುತ್ತವೆ. ಈ ಆಣೆಕಟ್ಟು ೧೫ ಕೋಟಿ ಹಣದ ಖರ್ಚಿನಿಂದ ನಿರ್ಮಿಸಲಾಗಿದೆ. ಆಣೆಕಟ್ಟಿನ ಉದ್ದ ೨ ಮೈಲಿ, ಎತ್ತರ ೧೬೦ ಅಡಿ.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ಸ್ತೋತ್ರ

ಪರಮಾತ್ಮನನ್ನು ಅರಿಯುವುದೇ ಜೀವನದ ಗುರಿ. ಅದೇ ಪರಮಪುರುಷಾರ್ಥ. ಅದೇ ಅಧ್ಯಾತ್ಮ ಸಾಧನೆ. ಮಹಾಭಾರತದಲ್ಲಿ ಮಹರ್ಷಿ ವೇದವ್ಯಾಸರು--

ಆಲೋಡ್ಯ ಸರ್ವಶಾಸ್ತ್ರಾಣಿ
ವಿಚಾರ್ಯ ಚ ಪುನಃ ಪುನಃ
ಇದಮೇಕಂ ಸುನಿಷ್ಪನ್ನಂ
ಧ್ಯೇಯೋ ನಾರಾಯಣಃ ಸದಾ

ಸಕಲ ಶಾಸ್ತ್ರಗಳನ್ನೂ ಆ ಮೂಲಾಗ್ರವಾಗಿ ಪರಿಶೀಲಿಸಿ ಮತ್ತೆ ಮತ್ತೆ ವಿಚಾರಮಾಡಿದ ಮೇಲೆ ಇದೊಂದು ವಿಷಯ ನಿಶ್ಚಯವಾಯಿತು. ಅದೆಂದರೆ ಸದಾ ಭಗವಂತನನ್ನು ಧ್ಯಾನಿಸುತ್ತಿರಬೇಕು -- ಎಂದಿದ್ದಾರೆ. ವ್ಯಾಸರ ಈ ಮಾತಿನಿಂದ ಭಗವಂತನನ್ನು ಧ್ಯಾನಿಸುವುದು ಸಕಲ ಶಾಸ್ತ್ರೋಪದೇಶಗಳ ಸಾರವೆಂದು ಮನದಟ್ಟಾಗುತ್ತದೆ. ಈ ಧ್ಯಾನ ಮಾರ್ಗವು ಸುಲಭವೂ, ಸರಳವೂ ಆಗಿದೆಯಲ್ಲದೆ ಎಲ್ಲರಿಗೂ ಎಲ್ಲ ಕಡೆಯಲ್ಲೂ ಸಾಧ್ಯವಾಗುವಂತಹುದು. ಆದ್ದರಿಂದಲೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು 'ಮಚ್ಚಿತ್ತಃ ಸತತಂ ಭವ', 'ಮನ್ಮನಾ ಭವ ಮದ್ಭಕ್ತಃ' --ಇತ್ಯಾದಿಯಾಗಿ ಮತ್ತೆ -- ಮತ್ತೆ ಉಪದೇಶಿಸಿದ್ದಾನೆ. ಪರಮಾತ್ಮನ ನಾಮಸ್ಮರಣೆ, ಸ್ತೋತ್ರ, ಜಪಗಳು ಧ್ಯಾನದಲ್ಲಿ ಸೇರುತ್ತವೆ.

ಪರಮೇಶ್ವರನ ಮಹಿಮೆಗಳನ್ನು ಮನದಟ್ಟು ಮಾಡಿಕೊಳ್ಳಲು ಸಹಾಯಮಾಡುವ ಪರಮಾತ್ಮನ ಗುಣಗಳ ಸಂಕೀರ್ತನೆಯೇ ಸ್ತೋತ್ರ. ಇಂಥ ಸ್ತೋತ್ರಗಳ ಪಠಣೆಯಿಂದ ಹೃದಯದಲ್ಲಿ ಸುಪ್ತವಾಗಿರುವ ಈಶ್ವರಭಾವನೆಯು ಜಾಗೃತಗೊಳ್ಳುತ್ತದೆ. ಮನಸ್ಸಿನಲ್ಲಿ ಅಡಗಿರುವ ಕೆಟ್ಟಭಾವನೆಗಳು ದೂರವಾಗುತ್ತವೆ. ಹೃದಯದಲ್ಲಿ ಆನಂದ ಹೆಚ್ಚುತ್ತದೆ. ಚಿತ್ತವು ಉಲ್ಲಾಸಗೊಳ್ಳುತ್ತದೆ. ಮನಸ್ಸು ಶಾಂತಿಯಲ್ಲಿ ನೆಲಸುತ್ತದೆ. ಸ್ತೋತ್ರಗಳನ್ನು ನಿತ್ಯವೂ ಪಠಣ ಮಾಡುವುದರಿಂದ ಆನಂದಾನುಭವ ಹೆಚ್ಚುತ್ತದೆ.

ಭಕ್ತ ಭಗವಂತನೆಡೆಗೆ ಸಾಗುವಾಗ ಅವನ ಮನದಲ್ಲಿ ಮೂಡಿ ಮಾಯವಾಗುವ ಹಲವು ಭಾವಗಳು ಸ್ತೋತ್ರಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಕೆಲವು ವೇಳೆ ತಾನು ಮಾಡಿದ ಪಾಪದ ಹೊರೆಯ ಅರಿವಾಗಿ ಅವನ್ನು ಹಗುರಮಾಡೆಂದು ಬೇಡುವನು. ಮತ್ತೆ ಕೆಲಸಮಯ ಸಂಶಯದ ಕಾನನದಲ್ಲಿ ಅಲೆದಾಡಿ ದಾರಿಕಾಣದಾದಾಗ ತನ್ನನ್ನು ಪಾರುಮಾಡೆಂದು ಕಾಡುವನು. ಭಗವಂತನನ್ನು ಎಂದು ಕಾಣುವೆನೋ ಎಂದು ಕಾತರಿಸುವ ಸ್ವಭಾವ ಒಮ್ಮೆ; ಮಿಂಚಿ ಮಾಯವಾದ ಭಗವಂತನಿಗಾಗಿ ಪಡುವ ವಿರಹ ವ್ಯಥೆಯೊಮ್ಮೆ ಆತನ ದರ್ಶನಾನಂದದಲ್ಲಿ ಮೈಮರೆತಾಗ ಜಿನುಗುವ ಆನಂದಲಹರಿಯೊಮ್ಮೆ ಒಂದಾದ ಮೇಲೊಂದು ಬಂದು ಹೋಗುತ್ತಿರುತ್ತವೆ. ಒಮ್ಮೆ ಭಗವಂತನ ಮೇಲೆ ಕೋಪ ಮಾಡಿಕೊಳ್ಳುವನು; ಒಮ್ಮೆ ಪ್ರೀತಿಸುವನು; ಒಮ್ಮೆ ಅವನೊಂದಿಗೆ ಜಗಳಕಾಯುವನು; ಮತ್ತೊಮ್ಮೆ ಅವನೊಂದಿಗೆ ರಾಜಿಮಾಡಿಕೊಳ್ಳುವನು. 'ನೀನು ನನ್ನನ್ನು ಉದ್ಧಾರ ಮಾಡದೆ ಇದ್ದರೆ ನಾನು ದುಃಖ ಪಡುವೆ; ಅದೇನು ನನಗೆ ಹೊಸದಲ್ಲ; ಆದರೆ ನಿನ್ನಲ್ಲಿ ಶರಣಾಗತನಾದವನೊಬ್ಬನು ಸೋತ ಎಂದರೆ ನಿನಗೇ ಅಪಖ್ಯಾತಿ' -- ಎಂದು ಯಾಮುನಾಚಾರ್ಯರು ದೇವರನ್ನು ಕಾಡುವರು. 'ಭಗವಂತನು ನನ್ನನ್ನು ಆಲಿಂಗಿಸಲಿ, ಆಚೆಗೆ ದಬ್ಬಲಿ, ಹಿಡಿದುಕೊಂಡು ಹೊಡೆಯಲಿ, ಬಡಿಯಲಿ; ಅವನೇ ನನ್ನ ಪ್ರಾಣನಾಥ; ನನಗೆ ಯಾರೂ ಗತಿ ಇಲ್ಲ' --ಎಂದು ಭಕ್ತಾಗ್ರಣಿ ಚೈತನ್ಯರು ಪ್ರಾರ್ಥಿಸುವರು. ತಾಯಿ ಕೋಪದಿಂದ ಮಗುವನ್ನು ಹೊಡೆದು ಆಚೆಗೆ ಅಟ್ಟಿದರೆ ಅದು ಹೋಗುವುದೆಲ್ಲಿಗೆ? ಅದಕ್ಕೆ ಗತಿ ಯಾರು? ಹೊಡೆದವಳೇ ಅದನ್ನು ಎತ್ತಿಕೊಳ್ಳಬೇಕಾಗುವುದು.



ಹೀಗೆ ಭಕ್ತರು ಸ್ತೋತ್ರಗಳ ಮೂಲಕ ಮಾನವ ಸಹಜವಾದ ಭಾಷೆಯಲ್ಲಿ ಭಗವಂತನೊಂದಿಗೆ ವ್ಯವಹರಿಸುವರು.

ಪ್ರಪಂಚದ ಐಶ್ವರ್ಯ -- ಕೀರ್ತಿ -- ಲಾಭ -- ಯಶಸ್ಸು -- ಸತಿ ಸುತರು -- ಮುಂತಾದ ಯಾವುದನ್ನೂ ಭಕ್ತರು ಪ್ರಾರ್ಥಿಸುವುದಿಲ್ಲ. ಭಕ್ತಿದಾರಿದ್ರ್ಯವನ್ನು ಹೋಗಲಾಡಿಸು -- ಎನ್ನುವರು. ಭವರೋಗ ವ್ಯಾಧಿಯನ್ನು ಪರಿಹರಿಸು -- ಎಂದು ಅಂಗಲಾಚುವರು. ಜನನ -- ಮರಣಗಳ ಕೋಟಲೆಯಿಂದ ಪಾರುಮಾಡು ಎನ್ನುವರು. ನೀನು ಕುಂಭೀನರಕಕ್ಕೆ ತಳ್ಳಿದರೂ ಚಿಂತೆಯಿಲ್ಲ; ನಿನ್ನ ಸ್ಮರಣೆಯೊಂದಿದ್ದರೆ ಸಾಕು --ಎಂದು ಬೇಡುವರು. ಕುಲಶೇಖರ ಆಳ್ವಾರರು ಮುಕುಂದಮಾಲಾ ಸ್ತೋತ್ರದಲ್ಲಿ ಈ ಭಾವನೆಯನ್ನು ಬಹಳ ಮನೋಹರವಾಗಿ ಬಿತ್ತರಿಸುವರು. ಅವರನ್ನುತ್ತಾರೆ :-- 'ಹೇ ಭಗವಂತ! ನನಗೆ ಧರ್ಮದಲ್ಲಾಗಲಿ, ವಿಷಯ ಸಂಚಯದಲ್ಲಾಗಲಿ, ಭೋಗದಲ್ಲಾಗಲಿ ಆಸಕ್ತಿ ಇಲ್ಲ. ಪೂರ್ವಕರ್ಮಾನುಸಾರ ಯಾವುದು ಹೇಗೆ ನಡೆಯಬೇಕೋ ಹಾಗೆ ನಡೆದು ಹೋಗಲಿ; ಆದರೆ ನಾನು ಮುಖ್ಯ ಎಂದು ಭಾವಿಸುವ ಪ್ರಾರ್ಥನೆ ಇದು; ಈ ಜನ್ಮದಲ್ಲಿ ಮತ್ತು ಮುಂದೆ ಬರಬಹುದಾದ ಇತರ ಜನ್ಮಗಳಲ್ಲಿ ಕೂಡ ನಿನ್ನ ಅಡಿದಾವರೆಗಳಲ್ಲಿ ಭಕ್ತಿ ನಿಶ್ಚಲವಾಗಿರಲಿ' --ಎಂದು ಭಗವಂತನಲ್ಲಿ ಮೊರೆ ಇಡುತ್ತಾರೆ. ಪರಾಭಕ್ತಿಯ ಮನೋಜ್ಞನಿದರ್ಶನ ಈ ಸ್ತೋತ್ರದಲ್ಲಿದೆ.

ಇಂತಹ ಸ್ತೋತ್ರಗಳನ್ನು ಪಠಿಸುತ್ತಾ ಅರ್ಥವನ್ನು ಪರಿಭಾವಿಸುತ್ತಿದ್ದರೆ --. ಮನಸ್ಸು ಜತಿ ದೌರಾತ್ಮ್ಯಂ -- ಮನಸ್ಸಿನ ದುರುಳತನ ಕಡಿಮೆಯಾಗಿ ಚಿತ್ತಶುದ್ಧಿಯಾಗುವುದು. ಇದರಿಂದ ಆತ್ಮತತ್ತ್ವದ ಅರಿವಾಗಿ ಮನುಷ್ಯನ ಎಲ್ಲ ಅನರ್ಥ ಪರಂಪರೆಗಳ ನಿವಾರಣೆಯಾಗುವುದು.

**ಎಚ್. ವಿ. ನರಸಿಂಹಮೂರ್ತಿ.**



## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ರುದ್ರಾಕ್ಷಿ ಧಾರಣೆ

---ವಿದ್ವಾನ್ 'ರಘುಸುತ'.

ರುದ್ರಾಕ್ಷವನ್ನು ಎಲ್ಲರೂ ಧರಿಸಬೇಕೆಂಬ ನಿಯಮವಿದೆ. ಇವರಲ್ಲಿ ಶಿವ, ವಿಷ್ಣು ಭಕ್ತರೆಂಬ ಭೇದವಿಲ್ಲ. ನಾಲ್ಕು ವರ್ಣಗಳವರೂ ನಾಲ್ಕು ಬೇರೆ ಬೇರೆ ಬಣ್ಣಗಳ ರುದ್ರಾಕ್ಷಿಗಳನ್ನು ಧರಿಸಬೇಕು.

ಸರ್ವಾಶ್ರಮಾಣಾಂ
ವರ್ಣಾನಾಂ ಸ್ತ್ರೀಶೂದ್ರಾಣಾಂ
ಶಿವಾಜ್ಞಯಾ ಧಾರ್ಯಾಃ
ಸದೈವ ರುದ್ರಾಕ್ಷಾಃ
(ಶಿವಪು. ವಿಶ್ವೇ. 25/47)

ಎಲ್ಲ ಆಶ್ರಮಗಳವರೂ ಹಾಗೂ ವರ್ಣಗಳವರೂ, ಹೆಂಗಸರು ಹಾಗೂ ಶೂದ್ರರೂ ಕೂಡ ರುದ್ರಾಕ್ಷಿಯನ್ನು ಧರಿಸಬೇಕೆಂದು ಪರಮೇಶ್ವರನ ಆಜ್ಞೆ. ಬ್ರಾಹ್ಮಣರು ಬೆಳ್ಳಗಿರುವುದನ್ನೂ, ಕ್ಷತ್ರಿಯರು ಕೆಂಪು ಬಣ್ಣದ್ದನ್ನೂ, ವೈಶ್ಯರು ಪೀತ ವರ್ಣದ್ದನ್ನೂ, ಶೂದ್ರರು ಕೃಷ್ಣವರ್ಣ ರುದ್ರಾಕ್ಷಿಯನ್ನು ಧರಿಸಬೇಕೆಂಬ ನಿಯಮವಿದೆ.

ರುದ್ರಾಕ್ಷಗಳಲ್ಲಿ ೧ ರಿಂದ ೧೪ ವದನಗಳಿರುವ ರುದ್ರಾಕ್ಷಗಳು ಮಾತ್ರ ಧರಿಸಲು ಯೋಗ್ಯವಾದುವು.

ಎರಡು ರೀತಿಯ ರುದ್ರಾಕ್ಷಗಳಿವೆ -- ರುದ್ರಾಕ್ಷಿ ಹಾಗೂ ಭದ್ರಾಕ್ಷಿ ಎಂಬುದು--

ರುದ್ರಾಕ್ಷಾಣಾಂ ತು ಭದ್ರಾಕ್ಷಃ
ಸ್ಯಾನ್ ಮಹಾಫಲಮ್ (ದೇವೀಭಾಗವತ XI, 7,6)

ರುದ್ರಾಕ್ಷದ ಮಧ್ಯದಲ್ಲಿ ಅಲ್ಲಲ್ಲಿ ಭದ್ರಾಕ್ಷವನ್ನು ಧರಿಸುವುದರಿಂದ ಮಹಾನ್ ಫಲದಾಯಕವಾಗುತ್ತದೆ.

ರುದ್ರಾಕ್ಷದ ಮಧ್ಯದಲ್ಲಿ ತನ್ನಷ್ಟಕ್ಕೆ ತಾನೇ ಉಂಟಾಗಿರುವ ಛಿದ್ರವಿರುತ್ತದೆ.

ಸ್ವಯ ಮೇವ ಕೃತಂ ದ್ವಾರಂ
ರುದ್ರಾಕ್ಷಂ ಸ್ಯಾದಿ ಹೋತ್ತಮಮ್
ಯತ್ತು ಪೌರುಷಯತ್ನೇನ ಕೃತಂ
ತನ್ಮಧ್ಯ ಮಂ ಭವೇತ್

ಈ ರೀತಿಯಲ್ಲಿ ಸ್ವತಃ ರಂಧ್ರವನ್ನು ಹೊಂದಿರುವ ರುದ್ರಾಕ್ಷವು ಉತ್ತಮವಾದುದಾಗಿರುತ್ತದೆ. ಪುರುಷ ಪ್ರಯತ್ನದಿಂದ ಮಾಡಲ್ಪಟ್ಟಿರುವ ರಂಧ್ರವನ್ನು ಹೊಂದಿರುವ ರುದ್ರಾಕ್ಷವು ಮಧ್ಯಮ ವರ್ಗದ್ದಾಗಿರುತ್ತದೆ.

ಒಂದು ವದನವಿರುವ ರುದ್ರಾಕ್ಷವನ್ನು ಈ ರೀತಿಯಲ್ಲಿ ವರ್ಣಿಸಲಾಗಿದೆ--

ಏಕವಕ್ತ್ರಂತೇ ರುದ್ರಾಕ್ಷಂ
ಪರತತ್ತ್ವ ಸ್ವರೂಪಕಮ್
(ದೇವೀಭಾಗವತ XI, 4)

ಏಕ ಮುಖ ರುದ್ರಾಕ್ಷವು ಸಾಕ್ಷಾತ್ ಪರಮೇಶ್ವರನ ಹಾಗೂ ಪರತತ್ತ್ವ (ಪರಬ್ರಹ್ಮ) ಸ್ವರೂಪವಾಗಿರುತ್ತದೆ. ಇದು ಪರತತ್ತ್ವವನ್ನು ಪ್ರಕಾಶಗೊಳಿಸುತ್ತದೆ. ಅಂತೆಯೇ--

ಬ್ರಹ್ಮಹತ್ಯಾಂ ವ್ಯಪೋಹತಿ

ಅಂದರೆ ಬ್ರಹ್ಮಹತ್ಯಾದೋಷವನ್ನೂ ಕೂಡ ನಾಶ ಮಾಡುವಂತಹುದಾಗಿದೆ. ಇದನ್ನು ಧರಿಸಬೇಕಾದರೆ,

'ಓಂ ಹ್ರೀಂ ನಮಃ'

ಎನ್ನುವ ಮಂತ್ರದೊಂದಿಗೆ ಧಾರಣೆ ಮಾಡಿಕೊಳ್ಳಬೇಕಾಗುತ್ತದೆ.

'ಓಂ ನಮಃ'
'ದ್ವಿವಕ್ತ್ರಂ ತು ಮುನಿ ಶ್ರೇಷ್ಠ
ಅರ್ಧನಾರೀಶ್ವರಾತ್ಮಕಮ್'

ದ್ವಿಮುಖ ಮಣಿಯು ಸಾಕ್ಷಾತ್ ಅರ್ಧನಾರೀಶ್ವರ ರೂಪವನ್ನು ಹೊಂದಿರುವಂತಹುದು. ಇದನ್ನು ಧರಿಸುವುದರಿಂದ ಶಿವ -- ಪಾರ್ವತಿಯರಿಬ್ಬರೂ ಪ್ರಸನ್ನರಾಗುವರು. 'ಓಂ ನಮಃ' ಎನ್ನುವ ಮಂತ್ರದ ಉಚ್ಚಾರಣೆಯೊಂದಿಗೆ ದ್ವಿಮುಖ ರುದ್ರಾಕ್ಷವನ್ನು ಧಾರಣೆ ಮಾಡಬೇಕಾಗಿದೆ.

'ಓಂ ಕ್ಲೀಂ ನಮಃ'
'ತ್ರಿಮುಖಂ ಚೈವ ರುದ್ರಾಕ್ಷಮ್
ಅಗ್ನಿತ್ರಯಸ್ವರೂಪಕಮ್'

ತ್ರಿಮುಖೀ ರುದ್ರಾಕ್ಷವು ಗಾರ್ಹಪತ್ಯ ಆಹವನೀಯ ಹಾಗೂ ದಕ್ಷಿಣಾಗ್ನಿ ಎನ್ನುವ ಮೂರೂ ಅಗ್ನಿಗಳ ಪ್ರತಿನಿಧಿಯಾಗಿದೆ. ಈ ತ್ರಿಮುಖ ರುದ್ರಾಕ್ಷವನ್ನು ಧರಿಸುವುದರಿಂದ ಐಶ್ವರ್ಯ ಪ್ರಾಪ್ತಿಯು ಉಂಟಾಗುತ್ತದೆ. 'ಓಂ ಕ್ಲೀಂ ನಮಃ' ಎನ್ನುವ ಮಂತ್ರವನ್ನು ಹೇಳಿಕೊಂಡು ಈ ರುದ್ರಾಕ್ಷವನ್ನು ಧರಿಸಬೇಕು.

ಓಂ ಹ್ರೀಂ ನಮಃ
ಚತುರ್ಮುಖಂ ತು ರುದ್ರಾಕ್ಷಾಂ
ಚತುರ್ವಕ್ತ್ರ ಸ್ವರೂಪಕಮ್

ನಾಲ್ಕು ವದನಗಳ ರುದ್ರಾಕ್ಷವು ಸಾಕ್ಷಾತ್ ಬ್ರಹ್ಮನ ಪ್ರತಿರೂಪವಾಗಿರುತ್ತದೆ. ಇದನ್ನು ಧರಿಸುವುದರಿಂದ ಉತ್ತಮ ಸಂತಾನ ಪ್ರಾಪ್ತಿಯಾಗುತ್ತದೆ. ಇದನ್ನು ಧರಿಸಬೇಕಾದಾಗ ಹೇಳಿಕೊಳ್ಳುವ ಮಂತ್ರವೆಂದರೆ 'ಓಂ ಹ್ರೀಂ ನಮಃ' ಎಂಬುದು.

'ಓಂ ಹ್ರೀಂ ನಮಃ'
'ಪಂಚವಕ್ತ್ರಂ ತು ರುದ್ರಾಕ್ಷಂ
ಪಂಚ ಬ್ರಹ್ಮಸ್ವರೂಪಕಮ್'

ಐದು ವದನಗಳ ರುದ್ರಾಕ್ಷವು ವಿಷ್ಣು, ಶಿವ, ಗಣೇಶ, ಸೂರ್ಯ ಹಾಗೂ ದೇವೀ -- ಎನ್ನುವ ಐದು ದೇವರುಗಳ ಪ್ರತಿರೂಪವಾಗಿರುತ್ತದೆ. ಇದನ್ನು ಧರಿಸುವುದರಿಂದ ನರಹತ್ಯೆ ಮಾಡಿದ್ದರೂ ಕೂಡ ಅಂತಹ ಪಾಪದಿಂದಲೂ ಮುಕ್ತಿ ದೊರೆಯುತ್ತದೆ. ಆದುದರಿಂದ ಈ ರುದ್ರಾಕ್ಷವನ್ನು ಧಾರಣೆ ಮಾಡಿಕೊಳ್ಳುವಾಗ 'ಓಂ ಹ್ರೀಂ ನಮಃ' ಎನ್ನುವ ಮಂತ್ರವನ್ನು ಪಠಿಸಬೇಕು.

'ಓಂ ಹ್ರೀಂ ನಮಃ'
'ಷಡ್ವಕ್ತ್ರಮಪಿ ರುದ್ರಾಕ್ಷಂ
ಕಾರ್ತಿಕೇಯಾಧಿದೈವತಮ್'

ಆರು ವದನಗಳ ರುದ್ರಾಕ್ಷವು ಸಾಕ್ಷಾತ್ ಕಾರ್ತಿಕೇಯ ಸ್ವರೂಪದ್ದಾಗಿರುತ್ತದೆ. ಇದನ್ನು ಧರಿಸುವುದರಿಂದ ಲಕ್ಷ್ಮಿ ಪ್ರಾಪ್ತಿ ಆಗುವುದೇ ಅಲ್ಲದೆ ಉತ್ತಮ ಆರೋಗ್ಯವನ್ನು ಆ ವ್ಯಕ್ತಿ ಪಡೆಯುತ್ತಾನೆ. 'ಓಂ ಹ್ರೀಂ ನಮಃ' ಎನ್ನುವ ಮಂತ್ರದ ಉಚ್ಚಾರಣೆಯಿಂದ ಈ ರುದ್ರಾಕ್ಷವನ್ನು ಧರಿಸಬೇಕು.

'ಓಂ ಹುಂ ನಮಃ'
'ಸಪ್ತ ವಕ್ತ್ರೋ ಮಹಾಭಾಗೋ
ಹ್ಯನಂಗೋ ನಾಮ ನಾಮತಃ'

ಏಳು ಮುಖಗಳ ರುದ್ರಾಕ್ಷವು ಅನಂಗ ಹೆಸರಿನ ಪ್ರತಿಸ್ವರೂಪದ್ದಾಗಿರುತ್ತದೆ. ಇದನ್ನು ಧರಿಸುವುದರಿಂದ ಚಿನ್ನವನ್ನು ಕದ್ದ ಪಾಪದಿಂದ ಮುಕ್ತನಾಗುವನು. 'ಓಂ ಹುಂ ನಮಃ' ಎನ್ನುವ ಮಂತ್ರದ ಉಚ್ಚಾರಣೆಯ ಸಹಿತ ಈ ರುದ್ರಾಕ್ಷದ ಧಾರಣೆ ಮಾಡಬಹುದು.

'ಓಂ ಹುಂ ನಮಃ'
'ಅಷ್ಟ ವಕ್ತ್ರೋ ಮಹಾದೇವಃ
ಸಾಕ್ಷೀ ದೇವೋ ವಿನಾಯಕಃ'

ಎಂಟು ವದನಗಳ ರುದ್ರಾಕ್ಷವು ಸಾಕ್ಷಾತ್ ವಿನಾ

### ದಾಸಸಾಹಿತ್ಯ ಪ್ರಾಜೆಕ್ಟ್, ತಿ. ತಿ. ದೇ.

# ಅತಿ ಸುಲಭದರದಲ್ಲಿ ಅತ್ಯುತ್ತಮ ಧ್ವನಿಸುರುಳಿಗಳು

ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಕುರಿತು ಕನ್ನಡದ ಹರಿದಾಸರು ಪರಂಪರೆಯಿಂದ ಹಾಡುತ್ತಿದ್ದು, ಭಕ್ತಿ ಸಾಹಿತ್ಯದ ಭಂಡಾರವೇ ಇಂದು ನಮಗೆ ತವನಿಧಿಯಾಗಿ ದೊರೆತಿದೆ. ಶ್ರೀ ಪಾದರಾಜ ವ್ಯಾಸರಾಜ, ಪುರಂದರ, ಕನಕ, ಪ್ರಸನ್ನವೆಂಕಟ, ವಿಜಯದಾಸ ಜಗನ್ನಾಥದಾಸ ಗೋಪಾಲದಾಸರೇ ಮೊದಲಾಗಿ ನೂರಾರು ಮಂದಿ ಸಾವಿರಾರು ಕೀರ್ತನೆಗಳನ್ನು ಮುಂದಿನವರಿಗೆ ಬಳುವಳಿಯಾಗಿ ಕೊಟ್ಟುಹೋಗಿದ್ದಾರೆ. ಅಂತಹ ಹಿರಿಯರ ಕೀರ್ತನೆಗಳನ್ನು ಕೇಳುವ ಮನನಮಾಡುವ ಅವಕಾಶವನ್ನು ಕಲ್ಪಿಸಲು ತಿ.ತಿ.ದೇ. ಧ್ವನಿಸುರುಳಿಗಳನ್ನು ತಯಾರಿಸಿದೆ. ನಾಡಿನ ಖ್ಯಾತ ಗಾಯಕ ವಿದ್ವನ್ಮಣಿಗಳು ಹಾಡಿರುವ ಈ ಗೀತೆ ಮಾಲೆಗಳು ಸುಲಭದರದಲ್ಲಿ ದೊರೆಯುವಂತೆ ಏರ್ಪಾಡು ಮಾಡಲಾಗಿದೆ.

| ನಂ | ಧ್ವನಿಸುರುಳಿಯ ಹೆಸರು | ಗಾಯಕರು | ಗೀತಕಾರರು |
|---|---|---|---|
| 3001 | ಪುರಂದರದಾಸರು -- ಶ್ರೀನಿವಾಸಸಂಸ್ತುತಿ | ಸರೋಜ, ಲಲಿತ. | ಪುರಂದರದಾಸರು. |
| 3002 | ಪುರಂದರದಾಸರು -- ಶ್ರೀನಿವಾಸವೈಭವ | ಎಂ.ಎಲ್. ವಸಂತಕುಮಾರಿ | ಪುರಂದರದಾಸರು. |
| 3003 | ಹರಿದಾಸರು ಕಂಡ ಶ್ರೀನಿವಾಸ | ಶ್ರೀ ಶ್ರೀ ವಿದ್ಯಾಭೂಷಣ ತೀರ್ಥರು | ವಿವಿಧ ಹರಿದಾಸರು. |
| 3004 | ತಿರುಮಲೆಯ ಚೆಲುವ | ವಾಣಿ ಜಯರಾಂ | ಪ್ರಸನ್ನ ವೆಂಕಟದಾಸರು. |
| 3005 | ಮೂರುನಾಮಗಳ ಮೂರುತಿ | ಸರೋಜ, ಲಲಿತ. | ಜಗನ್ನಾಥದಾಸರು, ಗೋಪಾಲದಾಸರು. |
| 3006 | ಶ್ರೀನಿವಾಸ ತತ್ವ | ಬೆಳ್ಳೂರುಸೋದರಿಯರು | ಪುರಂದರದಾಸರು. |
| 3007 | ಭಳಿರೆ ತಿರುಮಲರಾಯ | ಆರ್. ಕೆ. ಶ್ರೀಕಂಠನ್ | ನಿಜದಾಸರು. |
| 3008 | ಗೋವಿಂದ ಮಿಠಾಯಿ | ರತ್ನಮಾಲಾ ಪ್ರಕಾಶ್ | ಪುರಂದರದಾಸರು. |
| 3009 | ಗೋವಿಂದ ಗಾನಾಮೃತ | ಸಂತಭದ್ರಗಿರಿ ಅಚ್ಯುತದಾಸರು | ಪುರಂದರದಾಸರು. |

ಪ್ರತಿಯೊಂದು ಕ್ಯಾಸೆಟ್‌ನ **ಬೆಲೆ ರೂ. 25/-** ಮಾತ್ರ. ಅಂಚೆವೆಚ್ಚ ಪ್ರತ್ಯೇಕ.

ಬರೆಯಿರಿ : --- ಸಂಪಾದಕರು -- ಪುಸ್ತಕ ಮಾರಾಟ ವಿಭಾಗ, ತಿ.ತಿ.ದೇ. ತಿರುಪತಿ.



## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ :

**---ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ತಿರುಪತಿ.

ಯಕನ ಪ್ರತಿರೂಪವಾಗಿರುತ್ತದೆ. ಇದನ್ನು ಧರಿಸುವುದರಿಂದ ಪಂಚ ಮಹಾ ಪಾತಕಗಳನ್ನು ಮಾಡಿದ್ದಾಗ್ಯೂ, ಅದರ ನಿವಾರಣೆಯಾಗುತ್ತದೆ. 'ಓಂ ಹುಂ ನಮಃ' ಎನ್ನುವ ಮಂತ್ರದಿಂದ ಈ ರುದ್ರಾಕ್ಷವನ್ನು ಧರಿಸಿದಲ್ಲಿ, ಅಂತಹವರಿಗೆ ಪರಮ ಪದವು ಪ್ರಾಪ್ತವಾಗುತ್ತದೆ.

'ಓಂ ಹುಂ ನಮಃ
'ನವವಕ್ತ್ರಂ ತು ರುದ್ರಾಕ್ಷಂ
ನವಶಕ್ತ್ಯಧಿ ದೈವತಮ್
ತಸ್ಯ ಧಾರಣ ಮಾತ್ರೇಣ
ಪ್ರೀಯಂತೆ ನವ ಶಕ್ತಯಃ'

ಒಂಭತ್ತು ವದನಗಳ ರುದ್ರಾಕ್ಷವು ನವದುರ್ಗೆಯ ಪ್ರತೀಕವಾಗಿದೆ. ಅದನ್ನು 'ಓಂ ಹ್ರೀಂ ಹುಂ ನಮಃ' ಎನ್ನುವ ಮಂತ್ರದಿಂದ ಬಲಭುಜದ ಮೇಲೆ ಧರಿಸಿಕೊಳ್ಳುವುದರಿಂದ, ನವಶಕ್ತಿಗಳು ತಪ್ಪದೆ ಲಭಿಸುತ್ತವೆ.

'ಓಂ ಹ್ರೀಂ ನಮಃ'
'ದಶವಕ್ತ್ರಸ್ತು ದೇವೇಶಃ
ಸಾಕ್ಷಾದ್ದೇವೀ ಜನಾರ್ದನಃ'

ಹತ್ತು ವದನಗಳುಳ್ಳ ರುದ್ರಾಕ್ಷವು ಸಾಕ್ಷಾತ್ ಭಗವಾನ್ ಜನಾರ್ಧನನೇ ಆಗಿರುತ್ತಾನೆ. 'ಓಂ ಹ್ರೀಂ ನಮಃ' ಎನ್ನುವ ಮಂತ್ರದ ಸಹಾಯದಿಂದ ಈ ರುದ್ರಾಕ್ಷವನ್ನು ಧಾರಣೆ ಮಾಡಿದಲ್ಲಿ ಸಾಧಕನು ಪೂರ್ತಿ ಆಯುಸ್ಸನ್ನು ಹೊಂದುವನು. ಇದರ ಮುಖಾಂತರ ಅವನು ಮಾನಸಿಕ ಹಾಗೂ ದೈಹಿಕ ಶಾಂತಿಗಳನ್ನು ಹೊಂದುವನು.

'ಓಂ ಹ್ರೀಂ ಹುಂ ನಮಃ'
'ಏಕಾದಶ ಮುಖಂ ತ್ವಕ್ಷಂ
ರುದ್ರೈಕಾದಶ ದೈವತಮ್'
'ಏಕಾದಶಮುಖೋ ಯಸ್ತು
ರುದ್ರಾಕ್ಷಃ ಪರಮೇಶ್ವರಿ
ಸ ರುದ್ರೋ ಧಾರಣಾತ್ ತಸ್ಯ
ಸರ್ವತ್ರ ವಿಜಯಿೀ ಭವೇತ್'

ಹನ್ನೊಂದು ವದನಗಳ ರುದ್ರಾಕ್ಷವನ್ನು 'ಓಂ ಹ್ರೀಂ ಹುಂ ನಮಃ' ಎನ್ನುವ ಮಂತ್ರದಿಂದ ಧರಿಸಬೇಕು. ಈ ರೀತಿ ಧರಿಸಿದವನು ಸಾಕ್ಷಾತ್ ರುದ್ರರೂಪನಾಗಿ ಎಲ್ಲೆಡೆ ವಿಜಯವನ್ನು ಸಂಪಾದಿಸುವನು.

'ಓಂ ಕ್ರೌಂ ಕ್ಷೌಂ ರೌಂ ನಮಃ'
'ರುದ್ರಾಕ್ಷಂ ದ್ವಾದಶ ಮುಖಂ
ಮಹಾವಿಷ್ಣು ಸ್ವರೂಪಕಮ್
ದ್ವಾದಶಾದಿತ್ಯ ರೂಪಂ ಚ
ಬಿಭರ್ತ್ಯೇವ ಹಿ ತತ್ಪರಮ್'

ಹನ್ನೆರಡು ವದನಗಳ ರುದ್ರಾಕ್ಷವು ಸಾಕ್ಷಾತ್ ಮಹಾವಿಷ್ಣು ಸ್ವರೂಪದ್ದಾಗಿರುತ್ತದೆ. 'ಓಂ ಕ್ರೌಂ ಕ್ಷೌಂ ರೌಂ ನಮಃ' ಎನ್ನುವ ಮಂತ್ರದಿಂದ ಈ ರುದ್ರಾಕ್ಷವನ್ನು ಧಾರಣೆ ಮಾಡಬೇಕಾಗುತ್ತದೆ. ಇದರಿಂದ ಸಾಕ್ಷಾತ್ ಮಹಾವಿಷ್ಣುವನ್ನೆ ಸಾಧಕನು ಧಾರಣೆ ಮಾಡಿದಂತಾಗುತ್ತದೆ. ಇದನ್ನು ಕಿವಿಯಲ್ಲಿ ಧರಿಸುವುದು ಉತ್ತಮ. ಹೀಗೆ ಮಾಡುವುದರಿಂದ ಅಶ್ವಮೇಧಯಜ್ಞ ಮಾಡಿದ ಫಲವು ಪ್ರಾಪ್ತವಾಗುತ್ತದೆ.

'ಓಂ ಹ್ರೀಂ ನಮಃ'
'ತ್ರಯೋದಶ ಮುಖಂ ತ್ವಕ್ಷಂ
ಕಾಮದಂ ಸಿದ್ಧಿದಂ ಶುಭಂ
ತಸ್ಯ ಧಾರಣ ಮಾತ್ರೇಣ
ಕಾಮದೇವಃ ಪ್ರಸೀದತಿ'

ಹದಿಮೂರು ಮುಖಗಳುಳ್ಳ ರುದ್ರಾಕ್ಷವನ್ನು ಧರಿಸುವುದರಿಂದ ಎಲ್ಲ ಕಾಮನೆಗಳ ಪ್ರತಿ ಮೂರ್ತಿಯಾದ ಕಾಮದೇವನು ಪ್ರಸನ್ನ ನಾಗುವನು. 'ಓಂ ಹ್ರೀಂ ನಮಃ' ಈ ಮಂತ್ರದಿಂದ ಇದನ್ನು ಧರಿಸಬೇಕಾಗುತ್ತದೆ.

'ಓಂ ನಮಃ'
'ಚತುರ್ದಶಮುಖಂ ತ್ವಕ್ಷಂ
ರುದ್ರನೇತ್ರ ಸಮುದ್ಭವಮ್
ಸರ್ವ ವ್ಯಾಧಿಹರಂ ಚೈವ
ಸರ್ವದಾರೋಗ್ಯ ಮಾಪ್ನುಯಾತ್'

ಹದಿನಾಲ್ಕು ಮುಖಗಳ ರುದ್ರಾಕ್ಷಗಳು ರುದ್ರನ ಕಣ್ಣುಗಳಿಂದ ಉತ್ಪನ್ನವಾದವುಗಳು. ಆದ್ದರಿಂದ ಇವು ಭಗವಂತನ ನೇತ್ರ ಸ್ವರೂಪವಾದವುಗಳು. 'ಓಂ ನಮಃ' ಎನ್ನುವ ಮಂತ್ರದಿಂದ ಇದನ್ನು ಧರಿಸಿದಲ್ಲಿ, ಆ ವ್ಯಕ್ತಿಯಲ್ಲಿರುವ ಎಲ್ಲ ವ್ಯಾಧಿಗಳನ್ನೂ ಗುಣಪಡಿಸುತ್ತವೆ.

ಇವನ್ನು ಧರಿಸಿದ ನಂತರ ಆ ವ್ಯಕ್ತಿಯೂ ತುಂಬಾ ನಿಯಮ, ನಿಷ್ಠೆಯಿಂದ ಇರಬೇಕಾಗುತ್ತದೆ. ಪ್ರತಿನಿತ್ಯ ತಪ್ಪದೆ ಸ್ನಾನ, ಸಂಧ್ಯಾವಂದನಾದಿಗಳನ್ನು ಮಾಡಿ, ದೇವರ ಪೂಜೆಯನ್ನು ನಿಯಮನದಿಂದ ಮಾಡಬೇಕು. ಮದ್ಯ, ಮಾಂಸ, ಬೆಳ್ಳುಳ್ಳಿ, ಈರುಳ್ಳಿ, ಪರಸ್ತ್ರೀ ಸಂಗ, ಜೂಜು, ಸುಳ್ಳು ಹೇಳುವುದು, ದುಷ್ಟರ ಸಹವಾಸ -- ಇತ್ಯಾದಿಗಳನ್ನು ಬಿಡಬೇಕು.

ರುದ್ರಾಕ್ಷವನ್ನು ಮಂತ್ರ ಪೂರ್ವಕವಾಗಿಯೇ ಧರಿಸಬೇಕೆಂಬ ಕಟ್ಟಾ ನಿಯಮವಿದೆ. ಇದಕ್ಕೆ ತಪ್ಪಿದರೆ ಕೌರವ ನರಕವನ್ನು ಹೊಂದುವರು. ಹದಿನಾಲ್ಕು ಇಂದ್ರರು ರಾಜ್ಯಭಾರ ಮಾಡುವವರೆಗೂ ಈ ನರಕ ತಪ್ಪಿದ್ದಲ್ಲ.

ಗ್ರಹಣದ ದಿನಗಳಲ್ಲಿ, (ಮೇಷ ಹಾಗೂ ತುಲಾ ವಿಷುವತ್ ಸಂಕ್ರಮಣ ಕಾಲಗಳಲ್ಲಿ) ಅಮಾವಾಸ್ಯೆ ಹುಣ್ಣಿಮೆ ಹಾಗೂ ಪೂರ್ಣ ತಿಥಿಗಳಂದು ರುದ್ರಾಕ್ಷಗಳನ್ನು ಧರಿಸಿದಲ್ಲಿ ಸಂಪೂರ್ಣ ಪಾಪಗಳಿಂದ ಆ ವ್ಯಕ್ತಿಯು ನಿವೃತ್ತನಾಗುವನೆಂದು ಶಾಸ್ತ್ರಗಳು ಹೇಳುತ್ತವೆ. ✿ (ಸಂಗ್ರಹ)







# ನಾಳೆ ಎನ್ನುವುದು ಹಾಳು

---ಡಾ|| ವಿ. ಜಾನಕಿ.

ಸಾಮಾನ್ಯವಾಗಿ ಯಾವುದೇ ಕೆಲಸವನ್ನೇ ಆಗಲಿ ಅದನ್ನು ನಾಳೆಗೆ ಮಾಡೋಣವೆಂದು ಮುಂದಕ್ಕೆ ತಳ್ಳುವುದು; ಎಲ್ಲೆಡೆಯೂ ಕಂಡುಬರುತ್ತಿದೆ. ಇದಕ್ಕೆ ಪ್ರಾಯಶಃ ಎರಡು ಕಾರಣಗಳಿರಬಹುದು. ಮೊಟ್ಟ ಮೊದಲನೆಯದು ಆಲಸ್ಯ ಎರಡನೆಯದು ಒಂದು ರೀತಿಯ ತಾತ್ಸಾರ. ಕನ್ನಡದಲ್ಲಿ ಪ್ರಚಲಿತವಾಗಿರುವ ಇನ್ನೊಂದು ಗಾದೆಯನ್ನೂ ಕೇಳಿರಬಹುದು. ಎದ್ದರೆ ಆಳಲ್ಲ, ಆದರೆ ಏಳೋಲ್ಲ. ಹೌದು ಇವುಗಳೆಲ್ಲ ದರ ಹಿಂದೆಯೂ ಭಯಂಕರವಾದ ಆಲಸ್ಯ ನೆಲೆ ಮಾಡಿಕೊಂಡಿದೆ. ದೇಶದ ಬೆನ್ನೆಲುಬಾದ ಯುವ ಕರ ಕಡೆಗೇ ಎಲ್ಲರ ದೃಷ್ಟಿಯೂ ನೆಟ್ಟಿದೆ. ದೇಶದ ಉನ್ನತಿ, ಸಮೃದ್ಧಿ ಪ್ರತಿಯೊಂದೂ ಯುವಕರಿಂ ದಲೇ ಸಾಧ್ಯ. ಯುವಕರೇ ನಮ್ಮ ದೇಶದ ಬೆನ್ನು ಮೂಳೆ. ಆದರೆ ಇಂದಿನ ಪರಿಸ್ಥಿತಿ ಹೇಗಿದೆ, ಸ್ವಲ್ಪ ನೋಡೋಣ.

ಚಿಕ್ಕಮಕ್ಕಳಿಂದ ಹಿಡಿದು ಹಿರಿಯರವರೆವಿಗೂ. ಆಲಸ್ಯ ಮನೆಮಾಡಿಕೊಂಡು ಬಿಟ್ಟಿದೆ. ಇಂದು ಮಾಡಬೇಕಾದ ಕೆಲಸವನ್ನು ಇಂದೇ ಮಾಡದೆ ಹೋದರೆ ಎಂಥ ಅನರ್ಥ ಬೇಕಾದರೂ ಸಂಭವಿ ಸಬಹುದು. ಮಾನವನ ಜೀವನವೇ ಕ್ಷಣಿಕ, ನಶ್ವರ. ಸಂತರು, ಕವಿಗಳೂ ದಾರ್ಶನಿಕರು ಈ ಮಾತನ್ನೇ ಪದೇಪದೇ ಒತ್ತಿ ಒತ್ತಿ ಹೇಳಿದ್ದಾರೆ. ಮಹಾತ್ಮಾ ಕಬೀರ್‌ದಾಸ್ ಹೇಳುತ್ತಾರೆ :--

ಪಾನೀ ಕೇರಾ ಬುದ್‌ಬುದಾ
ಅಸ್ ಮಾನುಷ್‌ಕೀ ಜಾತ್.
ಪರ್‌ಮೇ ಪರಲಯ್ ಹೋಯಗಾ
ಬಹುರಿ ಕರೋಗೇ ಕಬ್

ಮನುಷ್ಯ ಜನ್ಮ ಅಶಾಶ್ವತ. ನೀರಿನ ಗುಳ್ಳೆಗಳಂತೆ. ಒಂದುಕ್ಷಣದಲ್ಲಿ ಪ್ರಲಯವಾಗಿ ಬಿಡಬಹುದು. ನೀನು ಮತ್ತೆಂದು ಮಾಡುವಿ. ಅದಕ್ಕೇ ಕಬೀರದಾಸರು ಕೂಡಲೇ ಕೆಲಸಮಾಡುವ ಉಪದೇಶವನ್ನು ಕೊಡುತ್ತಾರೆ.

ಕಾಲ್ಹಿ ಕರೇಸೋ ಆಜ್
ಕರ್ ಆಜ್ ಕರೇ ಸೋ ಅಬ್

ನಾಳೆ ಮಾಡುವುದನ್ನು ಇಂದೇ ಮಾಡು ಇಂದೇ ಮಾಡುವುದನ್ನು ಈಗಲೇ ಮಾಡು.

ಇಂದಿನ ವಿಜ್ಞಾನ ಯುಗದಲ್ಲಿ, ಯಂತ್ರಯುಗ ದಲ್ಲಿ ಮಾನವ ತನ್ನ ಆಲಸ್ಯಕ್ಕೆ ಬಹಳ ದೊಡ್ಡ ಮೊತ್ತವನ್ನು ದಂಡವಾಗಿ ತೆರಬೇಕಾದ ಪರಿಸ್ಥಿತಿ ಬಂದುದಾಗುತ್ತದೆ. ಇಂದು ಮಾಡಬೇಕಾದ ಕೆಲಸವನ್ನು ನಾವು ಇಂದೇ ಪ್ರಾರಂಭಿಸಿದರೆ ನಮ್ಮ ಮತ್ತು ದೇಶದ ಏಳಿಗೆ ಮತ್ತು ಸರ್ವತೋಮುಖ ಅಭಿವೃದ್ಧಿ ಖಂಡಿತ ಸಾಧ್ಯ. 'ಹನಿಗೂಡಿದರೆ ಹಳ್ಳ' ಪ್ರತಿಯೊಬ್ಬನ ಕರ್ತವ್ಯ ನಿಷ್ಠೆ ಮತ್ತು ಕಾರ್ಯತತ್ಪರತೆ ಖಂಡಿತ ದೇಶದ ಶ್ರೇಯಸ್ಸಿಗೆ ಆಧಾರ. ಇದಕ್ಕೆ ಸಮಯದ ಸದುಪಯೋಗ ಬಹಳ ಆವಶ್ಯಕ. ಸಮಯವನ್ನು ವೃಥಾ ಕಳೆದರೆ ಅದು ಖಂಡಿತ ತಿರುಗಿ ಬರುವುದಿಲ್ಲ. ಒಂದೊಂದು ಕ್ಷಣವೂ ರತ್ನದಂತೆ ಮಹಾರ್ಘವಾದುದು.

ಕ್ಷಣಶಃ ಕಣಶಶ್ಚೈವ
ವಿದ್ಯಾಮರ್ಥಂ ಚ ಸಾಧಯೇತ್
ಕ್ಷಣೇ ನಷ್ಟೇ ಕುತೋ ವಿದ್ಯಾ
ಕಣೇ ನಷ್ಟೇ ಕುತೋ ಧನಂ

ಒಂದೊಂದು ಕ್ಷಣವೂ ವಿದ್ಯೆಯನ್ನು ಅರ್ಜಿಸಬೇಕು, ಒಂದೊಂದು ಕಣ ಕಣವನ್ನು ಜೋಡಿಸಿ ಧನವನ್ನು ಸಂಪಾದಿಸಬೇಕು. ಹೀಗೆ ಮಾಡದೆ ಹೋದರೆ ವಿದ್ಯೆ ಮತ್ತು ಧನ ನಮ್ಮ ಕೈಸಿಗುವುದಿಲ್ಲ.

ಕಾರ್ಯತತ್ಪರತೆ ಇಲ್ಲದೆ, ಕೇವಲ ಔದಾಸೀನ್ಯದ ಆಲಸ್ಯ ಬಹಳ ದುಬಾರಿ ಆಗಿ ಪರಿಣಮಿಸಬಹುದು. ಸ್ಪರ್ಧಾತ್ಮಕವಾದ ಈ ಜಗತ್ತಿನಲ್ಲಿ ಒಂದೇ ಒಂದು ಕ್ಷಣದ ವಿಳಂಬವೂ ಅಪಾಯಕಾರಿಯಾಗಿ ಪರಿಣಮಿಸುತ್ತದೆ. ಇದು ನನ್ನ ಹೆಗಲ ಮೇಲಿನ ಹೊರೆ, ಇದನ್ನು ನಾನೇ ಹೊರಬೇಕು ಎಂಬ ದೃಷ್ಟಿಯಿಂದಲಾಗಲೀ ಅಥವಾ ಇದು ನಾನು ಮಾಡಬೇಕಾದ ಆದ್ಯಕರ್ತವ್ಯ. ನನ್ನ ಕರ್ತವ್ಯವನ್ನು ನಾನೇ ಮಾಡಬೇಕು -- ಎಂಬ ಭಾವನೆಯಿಂದ (ನಮ್ಮ ಕೆಲಸಗಳನ್ನು ಬೇರೆಯವರ ಹೆಗಲಿಗೆ ರವಾನಿಸುವ ಪ್ರಯತ್ನವನ್ನು ಪಡೆದೆ) ಕೂಡಲೇ ಅದರಲ್ಲಿ ಪ್ರವೃತ್ತರಾಗುವುದರಲ್ಲಿಯೂ ನಮ್ಮ ಶ್ರೇಯಸ್ಸು ಅಡಗಿದೆ. ಪ್ರೇಯಸ್ಸು ಕೂಡ ನಿಹಿತವಾಗಿದೆ. ಯುಕ್ತಾಯುಕ್ತ ವಿವೇಚನೆಯಿಂದ ಕೂಡಿದ ಮಾನವ, ಸರಿ ತಪ್ಪಿನ ವಿವೇಚನೆಯನ್ನು ಕಳೆದುಕೊಳ್ಳುವುದಾದರೂ ಏತಕ್ಕೆ? ಹೌದು, ಹಿಂದೆಯೇ ತಿಳಿಯಪಡಿಸಿದಂತೆ ಆಲಸ್ಯ. ಅದನ್ನೇ ದೀರ್ಘಸೂತ್ರತೆ ಎಂದೂ ಹೇಳುತ್ತಾರೆ. 'ಆಲಸ್ಯಂ ಹಂತಿ ಪುರುಷಂ' ಎಂದರೆ ಆಲಸ್ಯ ಮನುಷ್ಯನನ್ನೇ ನಾಶಪಡಿಸುತ್ತದೆಯಂತೆ. ಇಲ್ಲಿ ಒಂದು ಸಣ್ಣ ಕತೆ ನೆನಪಿಗೆ ಬರುತ್ತಿದೆ. ಬಹಳ ಆಲಸಿಯಾದ ರಾಜನ ಐಶ್ವರ್ಯ ಇನ್ನೇನು ಮುಗಿಯುವ ಸಮಯ ಹತ್ತಿರವಾಗುತ್ತಿದೆ -- ಎಂದು ಕಂಡುಬಂದಾಗ ಆ ರಾಜ ಯೋಗಿಯೊಬ್ಬರ ಬಳಿ ಇದಕ್ಕೆ ಪರಿಹಾರ ಕೇಳುತ್ತಾನೆ. ಯೋಗಿ ರಾಜನಿಗೆ ನೀನು ಪ್ರಾತಃಕಾಲ ೪ ಗಂಟೆಗೆ ಎದ್ದು ಭ್ರಮಣಕ್ಕೆ ಆರಂಭಿಸು. ನಿನ್ನ ಐಶ್ವರ್ಯ ಪುನಃ ನಿನ್ನ ಕೈಗೆ ಲಭಿಸುವುದು ಎನ್ನುತ್ತಾನೆ. ಪ್ರತಿದಿನವೂ ೯ ಗಂಟೆಗೆ ಏಳುತ್ತಿದ್ದ ರಾಜ ೪ ಗಂಟೆಗೆದ್ದರೆ, ರೈತ ಪೈರು ಕದ್ದು ಮನೆಗೆ ತೆಗೆದುಕೊಂಡು ಹೋಗುತ್ತಿರುವುದು, ಹಸು ಕರೆದು ಹಾಲನ್ನು ಗೊಲ್ಲ ತೆಗೆದುಕೊಂಡು ಹೋಗುತ್ತಿರುವುದು, ತೋಟಗಾರ ಹೂವು ಮತ್ತು ಹಣ್ಣುಗಳನ್ನು ಒಯ್ಯುತ್ತಿರುವುದು, ಸೇವಕ ಸೇವಕಿಯರೆಲ್ಲ ಗುಂಪುಕಟ್ಟಿಕೊಂಡು ಹರಟುತ್ತಿರುವುದು ಕಂಡುಬರುತ್ತದೆ. ಕೂಡಲೇ ರಾಜನಿಗೆ ತನ್ನ ತಪ್ಪಿನ ಅರಿವಾಗಿ ಕರ್ತವ್ಯ ಪ್ರಜ್ಞೆಮಾಡುತ್ತವೆ.

ಸ್ಪರ್ಧಾತ್ಮಕವಾದ ಈ ಜಗತ್ತಿನಲ್ಲಿ ನಾವು ಬಾಳಲು ಇಚ್ಚಿಸುವುದೇ ಆದರೆ ನಾವು ಆಲಸ್ಯಕ್ಕೆ ನಮಸ್ಕಾರ ಹೇಳಿ ಇಂದಿನ ಕೆಲಸವನ್ನು ಇದೇ ಕ್ಷಣವೇ ಮಾಡಲು ಪ್ರಾರಂಭಿಸಬೇಕು. ಯಾವ ಒಂದು ಸಬೂಬನ್ನೂ ಆಶ್ರಯಿಸದೆ, ನಮ್ಮ ಪವಿತ್ರ ಕರ್ತವ್ಯ ಎಂದು ಮನಗಂಡು, ಕಾಯೇನ, ವಾಚಾ, ಮನಸಾ ನಮ್ಮ ನಮ್ಮ ಕೆಲಸಗಳಲ್ಲಿ ಪ್ರವೃತ್ತರಾಗಬೇಕು. ಸ್ವಾಮಿ ವಿವೇಕಾನಂದರು ನಮ್ಮ ಯುವಜನಾಂಗವನ್ನು ಉದ್ದೇಶಿಸಿಯೇ ಪದೇ ಪದೇ ಹೇಳುತ್ತಿದ್ದರು. ಉತ್ತಿಷ್ಠತ, ಜಾಗ್ರತ, ಏಳು ಎದ್ದೇಳು. ಆಲಸ್ಯದ ಸಂಕೋಲೆಯಿಂದ ನಮ್ಮನ್ನು ನಾವು ಬಿಡಿಸಿಕೊಂಡು, ಅದನ್ನು ಕಿತ್ತೊಗೆದು ನಮ್ಮ ಮತ್ತು ದೇಶದ ಶ್ರೇಯಸ್ಸಿನತ್ತ ಧಾವಿಸಬೇಕಾದ ಪರಿಸ್ಥಿತಿ ಹಿಂದೆಂದೂ ಇಲ್ಲದಂತೆ ಈಗ ಬಂದಿದೆ. ಸ್ವಾಮಿ ವಿವೇಕಾನಂದರ ಅಮೃತವಾಕ್ಯಗಳನ್ನು ಜೀವನದ ದಾರಿದೀಪವೆಂದು ಸ್ವೀಕರಿಸಿ ನಮ್ಮ ಮತ್ತು ದೇಶದ ಅಂಧಕಾರವನ್ನು ಮೂಲೆಗುಂಪಾಗಿಸಿ ಎಲ್ಲೆಡೆಯೂ ಪ್ರಗತಿಯ ಬೆಳಕನ್ನು ಚೆಲ್ಲೋಣ. ನಾಳೆಯದನ್ನು ಇಂದೇ, ಈಗಲೇ ಮಾಡುತ್ತೇವೆ ಎಂಬ ಹಟವನ್ನು ತೊಟ್ಟು ದುಡಿಯೋಣ.



# ಕಾಶಿಯಲ್ಲಿನ ಒಂದು ಮಠ
# ಜಂಗಮವಾಡಿ

---ಎ. ಪಂಕಜ.

ಭಾರತದ ಅತಿ ಪ್ರಾಚೀನ ಪುಣ್ಯಕ್ಷೇತ್ರಗಳಲ್ಲಿ ಕಾಶಿ ಜಗತ್ಪ್ರಸಿದ್ಧವಾದದ್ದು. ವ್ಯಾಸ ಮಾಹಾಭಾರತದಲ್ಲೂ ಕಾಶಿಯ ಉಲ್ಲೇಖವಿದೆ. ಇಲ್ಲಿಯ ವಿಶ್ವನಾಥ, ವಿಶಾಲಾಕ್ಷಿ, ಅನ್ನಪೂರ್ಣೇಶ್ವರಿಯರ, ಗಂಗಾ ನದಿಯ ಹಿರಿಮೆಗರಿಮೆಗಳನ್ನು ವರ್ಣಿಸಲಸದಳ. ಸಮಸ್ತ ಹಿಂದೂ ಜನಕ್ಕೆ ಕಾಶೀಯಾತ್ರೆ ಮಾಡಿದಲ್ಲಿ ಜೀವನ ಸಾರ್ಥಕ ಎಂಬ ಭಾವನೆ ತಲೆತಲಾಂತರದಿಂದ ಬಂದಿದೆ. ಗಂಗೆಯಲ್ಲಿ ಮಿಂದು, ವಿಶ್ವನಾಥನ ದರ್ಶನ ಮಾಡಿ ಸಮಸ್ತ ಪಾಪಗಳನ್ನು ಕಳೆದುಕೊಳ್ಳಬಹುದು. ಅಲ್ಲಿಯೇ ಅಸು ನೀಗಿದರೆ ಮೋಕ್ಷ ಪ್ರಾಪ್ತಿ ಎಂದು ಜನದ ಅನಿಸಿಕೆ. ವಾಹನ ಸಂಚಾರ ಸೌಲಭ್ಯಗಳಿಲ್ಲದ ಕಾಲದಲ್ಲಿ ಜನರು ಮುಕ್ತಿ ಸಂಪಾದಿಸಲೆಂದು ಕಾಶಿಗೆ ಕಾಲುನಡಿಗೆಯಲ್ಲಿ ಪ್ರಯಾಣ ಮಾಡುತ್ತಿದ್ದರು. ಈಗ ಅಲ್ಲಿಗೆ ವಿಮಾನಯಾನದ ಸೌಕರ್ಯವೂ ಇದೆ. ಪ್ರತಿದಿನ ಲಕ್ಷಾಂತರ ಜನ ಹೋಗಿ ಬರುತ್ತಾರೆ. ನಿತ್ಯಯಾತ್ರೆ, ನಿತ್ಯಹಬ್ಬ ಎಂಬಂತೆ ಇಲ್ಲಿಯ ಮಹಿಮೆ.

ಈ ಪುಣ್ಯಕ್ಷೇತ್ರದಲ್ಲಿ ಕಾಶಿ ವಿಶ್ವನಾಥ ಮಂದಿರದೊಂದಿಗೆ ಇನ್ನೂ ಅನೇಕ ದೇವಾಲಯಗಳೂ ಮಠಗಳೂ ಇವೆ. ಸುಮಾರು ಒಂದೂವರೆ ಸಾವಿರ ದೇವಾಲಯ ಹಾಗೂ ಮುನ್ನೂರು ಮಠಗಳೂ ಇವೆ ಎಂದು ಪ್ರತೀತಿ. ಇದಲ್ಲದೆ ಸುಪ್ರಸಿದ್ಧ ಕಾಶಿ ವಿಶ್ವವಿದ್ಯಾನಿಲಯ, ಮಾನಸ ಮಂದಿರ, ಬಿರ್ಲಾದೇವಾಲಯ, ಸಾರನಾಥ ಬೌದ್ಧ ದೇವಾಲಯಗಳೂ ಪ್ರೇಕ್ಷಣೀಯ ಪ್ರಮುಖ ಸ್ಥಳಗಳೇ ಆಗಿರುತ್ತವೆ.

ಪ್ರಸ್ತುತ ಜಂಗಮನವಾಡಿ ಮಠವನ್ನು ಕುರಿತು ಈ ಲೇಖನ. ಈ ಮಠವು ಅತ್ಯಂತ ಪುರಾತನವಾದದ್ದು, ಜ್ಞಾನದೇಗುಲ ಆ ಜಾತಿ ಈ ಜಾತಿ ಎನ್ನದೆ ಬಂದವರಿಗೆ ಅನ್ನ ವಸತಿಗಳನ್ನು ನೀಡುವಂತಹ ಪವಿತ್ರ ಸ್ಥಳವಾಗಿದೆ. ಇಲ್ಲಿ ಪ್ರತಿಷ್ಠಾಪನೆ ಆಗಿರುವ ಶಿವಲಿಂಗದಲ್ಲಿ ಚಂದ್ರಮೌಳೀಶ್ವರ ಎಂಬಂತೆ ಚಂದ್ರನ ಗುರುತು ಇದೆ. ಶಿಖೆಯಿಂದ ಗಂಗಾ ಪ್ರವಾಹ ಹರಿದಂತೆ ಗೆರೆಗಳೂ ಇವೆ. ಇಲ್ಲಿ ಹರಕೆ ಹೊತ್ತವರ ಕೆಲಸವೆಲ್ಲಾ ಸಸೂತ್ರವಾಗಿ ನೆರವೇರುತ್ತದೆ. ವರ ಪ್ರದಾಯಕನಿವನು ಎಂಬ ಪ್ರತೀತಿಯೂ ಇದೆ.

ಈ ಸ್ಥಳ ಹಿಂದೆ ಹರಿಶ್ಚಂದ್ರನ ಮಗ ರೋಹಿತಾಶ್ವನಿಗೆ ಹಾವುಕಚ್ಚಿದ ಸ್ಥಳ, ವೀರಬಾಹುವಿನ ಮನೆತನದವರು ಇಂದಿಗೂ ಕಾಶಿಯ ಮಣಿಕರ್ಣಿಕಾ ಘಟ್ಟದಲ್ಲಿ ಸ್ಮಶಾನ ಕಾಯುತ್ತಾರೆ. ಅಲ್ಲಿ ಸ್ಮಶಾನದ ದೆಂಕಿ ಉರಿಯುತ್ತಲೇ ಇರುತ್ತದೆ. ಕಾಶಿಯಲ್ಲಿ ಸನ್ಯಾಸಿ, ಗರ್ಭಿಣಿ ಮತ್ತು ಮಕ್ಕಳು ಸತ್ತರೆ, ಇವರ ಹೆಣಗಳನ್ನು ರಾಜಘಾಟಿನಲ್ಲಿ ಹಾಗೆಯೇ ಗಂಗೆಗೆ ಹಾಕುವ ರೂಢಿ. ಇದೆ. ಪಾಪ ಸೋಂಕದ ಸನ್ಯಾಸಿ, ಎರಡು ಜೀವಗಳ ಗರ್ಭಿಣಿ, ಮತ್ತು ನಿಷ್ಕಲ್ಮಷ ಮಕ್ಕಳ ದೇಹವನ್ನು ಮೀನು ಮತ್ತಿತರ ಜಲಚರ ಪ್ರಾಣಿಗಳು ತಿಂದರೆ, ಇವರಿಗೆ ಮುಕ್ತಿ ಎನ್ನುವ ಭಾವನೆಯೇ ಹೀಗೆ ಹೆಣಗಳನ್ನು ಗಂಗೆಗೆ ಎಸೆಯುವುದಕ್ಕೆ ಕಾರಣ.

ಜಂಗಮವಾಡಿ ಮಠದ ಮೂಲ ಸಂಸ್ಥಾಪಕರು ವಿಶ್ವಾರಾಧ್ಯ ಭಗವತ್ಪಾದ್ಯರು. ಇವರು ಕಾಶಿಯ ಜ್ಯೋತೀರ್ಲಿಂಗ ವಿಶ್ವನಾಥನಿಂದ ಮಹಾಶಿವರಾತ್ರಿಯಂದು ದೇಹಧಾರಿಗಳಾಗಿ ಅವತರಿಸರೆಂದು ಹೇಳಿಕೆ. ದ್ವಾಪರಯುಗದಲ್ಲಿ ಜಗದ್ಗುರು ವಿಶ್ವಕರ್ಣ ಶಿವಾಚಾರ್ಯರು ದೂರ್ವಾಸ ಮಹರ್ಷಿಗಳಿಗೆ ಶೈವ ತತ್ವೋಪದೇಶ ಮಾಡಿದ ಸ್ಥಳವೂ ಇದೇ ಆಗಿರುತ್ತದೆ.

ಈ ಮಠದ ಪೀಠವೇರಿದ ಮಲ್ಲಿಕಾರ್ಜುನ ಶಿವಾಚಾರ್ಯಸ್ವಾಮಿಗಳು ೩೧೧ ವರ್ಷಗಳ ಕಾಲ ಬದುಕಿದ್ದರು. ತಮ್ಮ ಯೋಗಸಿದ್ಧಿಯಿಂದ ದೇಹಧಾರಿ ಆಗಿಯೇ ಆಕಾಶಗಮನದ ಮೂಲಕ ನೇಪಾಳ, ಹೈದರಾಬಾದ್ ಮತ್ತಿತರ ಪ್ರದೇಶಗಳಿಗೆ ಹೋಗಿ ಬರುತ್ತಿದ್ದರು. ತಮ್ಮ ೩೧೧ ನೆಯ ವರ್ಷದಲ್ಲಿ ಸಜೀವ ಆದರು. ಅವರ ಆ ಗದ್ದುಗೆ ಈ ಮಠದಲ್ಲಿದೆ. ಇಂದಿಗೂ ಅದು ಎಲ್ಲರಿಂದ ಪೂಜಿಸಲ್ಪಡುತ್ತದೆ.

ಕ್ರಿ. ಶ. ೫೭೪ ರಲ್ಲಿ ಕಾಶಿಯ ದೊರೆ ಜಯನಂದ ದೇವನು, ಜಂಗಮವಾಡಿ ಮಠಕ್ಕೆ ಕೊಟ್ಟ ದಾನಪತ್ರ ಈಗ ಮಠದಲ್ಲಿ ಸುರಕ್ಷಿತವಾಗಿದೆ. ಸಾವಿರದ ನಾನೂರು ವರ್ಷಗಳ ಹಿಂದೆ ಬರೆದ ದಾನಪತ್ರ ಇನ್ನೂ ಜೀವಂತವಾಗಿದೆ ಎಂಬುದು ಪರಮಾಶ್ಚರ್ಯಕರ ಸಂಗತಿ. ಆದರೂ ಸತ್ಯಸಂಗತಿ. ತುಂಬಾ ಜೀರ್ಣಾವಸ್ಥೆಯಲ್ಲಿರುವ ಈ ಪತ್ರದ ನಕಲನ್ನು ತಾಮ್ರಪತ್ರದಲ್ಲಿ ಕೆತ್ತಿರುತ್ತಾರೆ. ಕರ್ಮಮೇ

ಶ್ವರ ದೇವಾಲಯದಿಂದ ಗಂಗಾನದೀ ತಟದವರೆಗೆ ಗೋವುಗಳು ಸಂಚರಿಸುವ ವಿಶಾಲ ಭೂಭಾಗ ವೆಲ್ಲಾ ಜಂಗಮವಾಡಿ ಮಠಕ್ಕೆ ಸೇರಿರತಕ್ಕದು. ಈ ಭೂಮಿಯ ಉತ್ಪತ್ತಿಯೂ ಆ ಮಠಕ್ಕೇ ಸೇರಿದ್ದು! ಎಂಬುದೇ ಈ ದಾನಪತ್ರದ ಅಭಿಪ್ರಾಯ. ಒಮ್ಮೆ ಮಠಕ್ಕೆ ಕೇಡೆಣಿಸಲು ಬಯಸಿದ ಮಂದಿ ನ್ಯಾಯಾಲಕ್ಕೆ ದೂರನ್ನು ತಂದಾಗ, ಈ ದಾನಪತ್ರ ವಿದ್ದುದರಿಂದಲೇ ಕೋರ್ಟಿನಲ್ಲಿ ಮಠಕ್ಕೆ ಜಯ ಲಭಿಸಿದ್ದು.

ಇಲ್ಲಿಯ ಪೀಠಾಧಿಕಾರಿಗಳು ಮಠಕ್ಕೆ ಅನೇಕ ಕಡೆಗಳಿಂದ ಸಾವಿರಾರು ಪುಸ್ತಕಗಳನ್ನು, ತಾಳೇಗರಿಗಳನ್ನು ತಂದು ಉತ್ತಮ ದರ್ಜೆಯ ಗ್ರಂಥಾಲಯ ಮಾಡಿದ್ದಾರೆ. ಮಠದಲ್ಲೇ ಬ್ಯಾಂಕೊಂದನ್ನು ನಡೆಸಿ, ಆ ಮೂಲಕ ಮಠದ ಆರ್ಥಿಕ ಸುಧಾರಣೆ ಮಾಡಿರುತ್ತಾರೆ. ಡಾ|| ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಸಾಹಿತ್ಯ ಮತ್ತು ಸಾಂಸ್ಕೃತಿಕಗಳೆರಡಲ್ಲೂ ಸತ್ಕಾರ್ಯಗಳನ್ನು ಮಾಡಿರುತ್ತಾರೆ.

ಕಾಶಿಯಲ್ಲಿ ಇರುವ ಹಿಂದೂ ವಿಶ್ವವಿದ್ಯಾನಿಲಯಕ್ಕೆ ಮದನ ಮೋಹನ ಮಾಳವೀಯರ ಅಪೇಕ್ಷೆಯಂತೆ, ಜಂಗಮನವಾಡಿ ಮಠದವರು ಎರಡು ಸಾವಿರ ಎಕರೆ ಭೂಮಿಯನ್ನು ದಾನ ಕೊಟ್ಟಿರುತ್ತಾರೆ.

ಆಶ್ಚರ್ಯಕರ ಸಂಗತಿ ಎಂದರೆ ಈ ಮಠಕ್ಕೆ ಹಿಂದೂ ಮುಸಲ್ಮಾನ ಎಂಬ ಬೇಧವಿಲ್ಲದೆ ಭೂದಾನ ಕೊಟ್ಟಿರುತ್ತಾರೆ.

ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ದೊರೆ ಕೃಷ್ಣರಾಜಒಡೆಯರು, ಜಂಗಮನವಾಡಿ ಮಠದ ಸ್ವಾಮಿಗಳಾದ ಪರೀಶ್ವರ ಶಿವಾಚಾರ್ಯರನ್ನು ಕರೆಸಿ, ಪ್ರತಿದಿನವೂ ಮೈಸೂರು ಮಹಾರಾಜರ ಹೆಸರಿನಲ್ಲಿ ಹದಿನೈದು ಜನಕ್ಕೆ ಪ್ರತಿದಿನವೂ ಊಟಹಾಕುವ ವ್ಯವಸ್ಥೆ ಮಾಡುವಂತೆ ತಿಳಿಸಿದರು. ಅದಕ್ಕಾಗಿ ತಮ್ಮ ವರ್ಧಂತಿಯ ದಿನದಂದು ತಪ್ಪದೆ ಆರುನೂರು ರೂಗಳನ್ನು ಕಳುಹಿಸಿ ಕೊಡುತ್ತಿದ್ದರು. ಮಠದಲ್ಲಿರುವ ತಾಮ್ರಪತ್ರದಲ್ಲಿ ಈ ಉಲ್ಲೇಖನವಿದೆ.

ಕಾಶಿಯಲ್ಲಿರುವ ಅತಿ ದೊಡ್ಡದಾದ ಈ ಜಂಗಮ ಮಠ ಇಂದಿಗೂ ನೂರಾರು ವಿದ್ಯಾರ್ಥಿಗಳಿಗೆ ಊಟ ವಸತಿಗಳನ್ನು ಕಲ್ಪಿಸಿಕೊಟ್ಟ ವಿದ್ಯಾರ್ಥಿ ನಿಲಯವಾಗಿದೆ. ಕಾಶಿಗೆಂದು ಬಂದ ಯಾತ್ರಾರ್ಥಿಗಳಿಗೆ ಧರ್ಮಶಾಲೆ ಆಗಿದೆ. ಪದೇ ಪದೇ ಉತ್ತಮ ವಿಚಾರಗಳ ಪ್ರವಚನಗಳು ಇಲ್ಲಿ ನಡೆಯುತ್ತಿರುತ್ತದೆ.

ಕಾಶಿಗೆಂದು ಹೋದವರು ವಿಶ್ವನಾಥ, ವಿಶಾಲಾಕ್ಷಿಯರ ದರ್ಶನದೊಂದಿಗೆ ಜಂಗಮನವಾಡಿ ಮಠಕ್ಕೂ ಹೋಗಿ ಅಲ್ಲಿಯ ವಿಶೇಷಗಳನ್ನು ವೀಕ್ಷಿಸಬಹುದು.





# ವಾರ್ತಾ ಲಹರಿ

## ಯಶಸ್ವಿಯಾದ ವಾರ್ಷಿಕ ಬ್ರಹ್ಮೋತ್ಸವಗಳು

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ವಾರ್ಷಿಕ ಬ್ರಹ್ಮೋತ್ಸವಗಳು ಸೆಪ್ಟೆಂಬರ್ 17 ರಿಂದ 26 ರವರೆಗೆ ಬಹು ವೈಭವದಿಂದ ಯಶಸ್ವಿಯಾಯಿತು.

ಪ್ರತಿವರ್ಷದಂತೆ ಈ ವರ್ಷವೂ ಬ್ರಹ್ಮೋತ್ಸವಗಳಲ್ಲಿ ಹೆಚ್ಚುವ ಯಾತ್ರಿಕ ಭಕ್ತರ ಅಗತ್ಯಗಳನ್ನು ಪೂರೈಸಲು ಹೆಚ್ಚಿನ ಸಿಬ್ಬಂದಿ, ವ್ಯವಸ್ಥೆ ಮಾಡಲಾಗಿದ್ದಿತು. ಮೊದಲು ಬಂದವರಿಗೆ ಮೊದಲು ವಸತಿ ಸೌಲಭ್ಯನೀಡಿಕೆ, ಯಾತ್ರಿಕರಿಗಾಗಿ ಸಲಹೆ ಸೂಚನೆಗಳನ್ನು ನೀಡುವ ವಿಚಾರಣಾ ಕೇಂದ್ರಗಳೂ, ಪುಸ್ತಕ ಮಾರಾಟ ಕೇಂದ್ರಗಳು, ವೈದ್ಯ ಸದುಪಾಯ, ಶಾಂತಿ ಭದ್ರತೆಗಳ ಪರಿರಕ್ಷಣೆಗಾಗಿ ವಿಶೇಷ ಪೋಲೀಸ್, ಗೃಹರಕ್ಷಕದಳಗಳ ಏರ್ಪಾಡು, ಅಲ್ಪೋಪಹಾರ ಮಾರಾಟ ವ್ಯವಸ್ಥೆ, ಆರೋಗ್ಯ, ಶುಭ್ರತಾ ವ್ಯವಸ್ಥೆಗಳನ್ನು ಹೆಚ್ಚಿನ ಆಸಕ್ತಿಯಿಂದ ನೋಡಿಕೊಳ್ಳಲಾಯಿತು. ಜೊತೆಗೇ ಆಂಧ್ರಪ್ರದೇಶದ ರಸ್ತೆ ಸಾರಿಗೆ ಸಂಸ್ಥೆಯವರು ಹೆಚ್ಚಿನ ಬಸ್‌ಗಳ ವ್ಯವಸ್ಥೆಯನ್ನೂ ಮಾಡಿದ್ದರು.

ಒಟ್ಟು ಒಂಭತ್ತು ದಿನಗಳಲ್ಲಿ -- ಧ್ವಜಾರೋಹಣದಿಂದ ಧ್ವಜಾವರೋಹಣದವರೆಗೆ -- ಐದು ಲಕ್ಷಕ್ಕೂ ಹೆಚ್ಚು ಮಂದಿ ತಿರುಮಲೆಯನ್ನು ದರ್ಶಿಸಿದರೆಂದು ಅಂದಾಜು ಮಾಡಲಾಗಿದೆ. ಎಂಬತ್ತು ಸಾವಿರಮಂದಿ ವಿಶೇಷಪ್ರವೇಶದ ಟಿಕೆಟ್ ಕೊಂಡು ದರ್ಶನಮಾಡಿದರು. ಈ ಅವಧಿಯಲ್ಲಿ ಸ್ವಾಮಿಯ ಆದಾಯ ಒಂದುಕೋಟಿ ಎಂಬತ್ತೊಂದು ಲಕ್ಷ ರೂಗಳಿಗೂ ಹೆಚ್ಚಾಗಿದ್ದು, ಇದರಲ್ಲಿ ಹುಂಡಿಯ ಮೂಲಕ 1,17,65,328 ರೂಗಳು, ಆರ್ಜಿತದ ಮೂಲಕ 31,67,071 ರೂಗಳೂ, ಪ್ರಸಾದ ಮಾರಾಟದ ಮೂಲಕ 32,60,337 ರೂಗಳೂ ಸೇರಿವೆ.

ಇದೇ ಅವಧಿಯಲ್ಲಿ ಹಿಂದಿನ ವರ್ಷದ ಆದಾಯ ಎರಡುಕೋಟಿ ರೂಗಳನ್ನು ದಾಟಿದ್ದಿತು ಎಂದು ಮೇಲುನೋಟಕ್ಕೆ ತೋರಬಹುದಾದರೂ ಈ ಬಾರಿ ಅಕ್ಟೋಬರ್ ತಿಂಗಳಲ್ಲಿ ನವರಾತ್ರಿ ಬ್ರಹ್ಮೋತ್ಸವಗಳೂ ಇರುವುದರಿಂದ ಈಗ ಯಾತ್ರಿಕ ಸಂದಣಿ ಕಡಮೆಯಾಗಿರುವುದು ಸಹಜವೆಂದೇ ಭಾವಿಸಲಾಗಿದೆ.

ಸೆಪ್ಟೆಂಬರ್ 22 ರಂದು ಗರುಡೋತ್ಸವ ಬ್ರಹ್ಮೋತ್ಸವದಲ್ಲಿ ಒಂದು ಪ್ರಮುಖ ಘಟ್ಟ. ಅಂದು ಸ್ವಾಮಿ ಗರುಡವಾಹನನಾಗಿ ಊರಮೆರವಣಿಗೆ ಬರುವುದು ಜನರಲ್ಲಿ ಹೆಚ್ಚಿನ ಭಕ್ತಿ ಭಾವವನ್ನು ಹೊಮ್ಮಿಸುತ್ತದೆ. ಮಕರಕಂಠಿ ಹಾರ, ಲಕ್ಷ್ಮೀಹಾರ ಮುಂತಾದ ಮೂಲವರಿಗೆ ಬಳಸುವ ಆಭರಣಾದಿಗಳನ್ನು ಉತ್ಸವ ಮೂರ್ತಿ ತೊಟ್ಟು ಭಕ್ತರ ಮೇಳದಲ್ಲಿ ಗರುಡಾರೂಢನಾಗಿ, ಗೋವಿಂದನಾಮ ಜಪ ಆಕಾಶವನ್ನೆಲ್ಲ ತುಂಬಿರಲು ಹೊರಬಂದು ಊರೆಲ್ಲ ದರ್ಶನ ನೀಡುವುದು ಒಂದು ಅದ್ಭುತವಂತೆಯೇ ಎನ್ನಬರುತ್ತದೆ. ಅಂದು ಸ್ವಾಮಿಗೆ ಸಮರ್ಪಣೆಯಾಗಲು ಗೋದಾದೇವಿಯ ಶ್ರೀವಿಲ್ಲಿಪುತ್ತೂರಿನ ದೇವಾಲಯದಿಂದ ತುಲಸೀಮಾಲೆಗಳೂ, ಮದರಾಸಿನಿಂದ ಶ್ವೇತ ಛತ್ರಗಳೂ ಬರುತ್ತವೆ. ಮುಖ್ಯವಾಗಿ ಆಂಧ್ರಪ್ರದೇಶದ ಸರ್ಕಾರದ ಪರವಾಗಿ ಸ್ವಾಮಿಗೆಂದು ಹೊಸ ರೇಷ್ಮೆ ವಸ್ತ್ರಗಳನ್ನು ಮುಖ್ಯಮಂತ್ರಿಗಳು ಗರುಡೋತ್ಸವದಂದೇ ತಂದು ನೀಡುವ ಆಚಾರ. ಇವೆಲ್ಲವೂ ಸೇರಿ ಅಂದು ತಿರುಮಲೆಯಲ್ಲಿ ಆನಂದ ಸಮಾರಾಧನೆಯಾಯಿತು. ಇದನ್ನು ಆಕಾಶವಾಣಿ ಪ್ರತ್ಯಕ್ಷ ಪ್ರಸಾರ ಮಾಡಿತು.

22 ರಂದು ಮಧ್ಯಾಹ್ನ ತಿರುಮಲೆಗೆ ಆಗಮಿಸಿದ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಕೆ. ವಿಜಯಭಾಸ್ಕರ ರೆಡ್ಡಿ ಯವರು ಗರುಡೋತ್ಸವದಲ್ಲಿ ಪಾಲುಗೊಂಡದ್ದೇ ಅಲ್ಲದೆ ಮಾರನೆಯದಿನ ತಿರುಮಲೆಗೆ ಆಗಮಿಸಿದ ಭಾರತದ ಅಧ್ಯಕ್ಷರನ್ನು ಸ್ವಾಗತಿಸಲು ನಿಂತರು. ಡಾ|| ಶಂಕರ ದಯಾಳ ಶರ್ಮರು 23 ರಂದು ಸಂಜೆ ತಿರುಮಲೆಗೆ ಆಗಮಿಸಿ ಸ್ವಾಮಿ ದರ್ಶನವನ್ನು ಪಡೆದರು. ಅಂದು ಸಂಜೆಯ ವಿಪರೀತ ವರ್ಷದಿಂದ ಆಲಯ ಪ್ರಾಂಗಣದಲ್ಲಿ ನೀರು ನಿಂತಿದ್ದಿತಾದರೂ ರಾಷ್ಟ್ರಪತಿ ದಂಪತಿಗಳು ಆ ನೀರಿನಲ್ಲಿಯೇ ಪ್ರದಕ್ಷಿಣಾ ಪಥದಲ್ಲಿ ನಡೆದು ವಿಮಾನವೆಂಕಟೇಶ್ವರನ ದರ್ಶನ ಪಡೆದು ರಾಷ್ಟ್ರಪತಿಗಳ ಕುಟುಂಬಕ್ಕೆ ಆಲಯ ಹುಂಡಿಯಲ್ಲಿ ಕಾಣಿಕೆಯನ್ನರ್ಪಿಸಿದರು. ಮಹಾದ್ವಾರದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ತಿ.ತಿ.ದೇ. ಅಧ್ಯಕ್ಷರು ಶ್ರೀ ಎ. ಚೆಂಗಲ್‌ರೆಡ್ಡಿ, ಜೆ. ಇ. ಓ. ಶ್ರೀ ವೆಂಕಟ್ರಾಮಯ್ಯ, ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ಶ್ರೀ ರಾಮಮೂರ್ತಿ, ಶ್ರೀ ಪ್ರಕಾಶ ಅಗ್ರವಾಲ್, ಶ್ರೀ ನಾಚು ಶೇಷಗಿರಿರಾವ್, ಶ್ರೀ ಬಾಲರಾಜು, ಮುಂತಾದವರು ಸ್ವಾಗತವನ್ನು ನುಡಿದರು.

ರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮರು ತಮ್ಮ ಪತ್ನಿ ಶ್ರೀಮತಿ ವಿಮಲಾಶರ್ಮ ಅವರೊಡನೆ ಸುಮಾರು ಇಪ್ಪತ್ತು ನಿಮಿಷ ಆಲಯದಲ್ಲಿದ್ದರು. ರಂಗನಾಯಕ ಮಂಟಪದಲ್ಲಿ ವೇದಪಂಡಿತರು ಅವರಿಗೆ ವೇದಾಶೀರ್ವಚನ ನೀಡಿದರು. ಶ್ರೀ ಎ. ಚೆಂಗಲ್‌ರೆಡ್ಡಿ ಅವರು ರಾಷ್ಟ್ರಪತಿಗಳಿಗೆ ಪ್ರಸಾದಗಳನ್ನು ನೀಡಿದರು. ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ತಿ.ತಿ.ದೇ.ಗಳ ನೂತನ ಧ್ವನಿಸುರುಳಿ ಅರುಣಂ (ಸೂರ್ಯನಮಸ್ಕಾರ ವಿವರಣೆ) ಅನ್ನೂ ಬ್ರಹ್ಮೋತ್ಸವಗಳ ವೀಡಿಯೋ ಕ್ಯಾಸೆಟ್ ಅನ್ನೂ ನೀಡಿದರು. ಪುನಃ ಶುಕ್ರವಾರ ಬೆಳಗ್ಗಿನ ಸುಪ್ರಭಾತ, ಅಭಿಷೇಕ ಸೇವೆಗಳಲ್ಲಿ ಭಾಗವಹಿಸಿದ ರಾಷ್ಟ್ರಪತಿ ದಂಪತಿಗಳು ನಂತರ ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯವನ್ನೂ ಸಂದರ್ಶಿಸಿ ಆರಾಧನೆ ನಡೆಸಿದರು. ರಾಷ್ಟ್ರಪತಿಗಳೊಡನೆ ರಾಜ್ಯದ ಮುಖ್ಯಮಂತ್ರಿ ಶ್ರೀ ಕೆ. ವಿಜಯಭಾಸ್ಕರರೆಡ್ಡಿ, ಮಂತ್ರಿಗಳು ಶ್ರೀ ಸಮರಸಿಂಹಾರೆಡ್ಡಿ, ಶ್ರೀ ಚಂದ್ರಶೇಖರ್, ಶ್ರೀ ಮರ್ರಿ ಶಶಿಧರ ರೆಡ್ಡಿ ಮೊದಲಾದವರಿದ್ದರು.

ಶನಿವಾರ 25--9--93 ರಂದು ಬೆಳಗ್ಗೆ ರಥೋತ್ಸವ ವಿಜೃಂಭಣೆಯಿಂದ ನಡೆಯಿತು. ಸಾವಿರಾರು ಮಂದಿ ಭಕ್ತರು ತಿರುಮಲೆಯ ನಾಲ್ಕು ರಥ ಬೀದಿಯಲ್ಲೂ ನಿಂತು ಸ್ವಾಮಿಯನ್ನು ಸ್ವಾಗತಿಸಿದರು. ರಥದ ರಜ್ಜುಗಳನ್ನು ಹಿಡಿದೆಳೆದರಲ್ಲಿ ಅಸಂಖ್ಯ ಭಕ್ತರೊಡನೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಸಂರಕ್ಷಣಾಧಿಕಾರಿ ಶ್ರೀ ವೈ. ಎಸ್. ಎನ್. ಶರ್ಮ, ಡೈ.ಇ.ಓ. ಶ್ರೀ ಪಟ್ಟಾಭಿರಾಮರೆಡ್ಡಿ ಹಾಗೂ ಹಲವಾರು ಮಂದಿ ಧರ್ಮಕರ್ತರ ಮಂಡಳಿಯ ಸದಸ್ಯರೂ ಇದ್ದರು. ಭಜನೆಗಾಯನಗಳ ನಡುವೆ ವೇದಘೋಷದ ನಡುವೆ ದ್ರವಿಡ ಪ್ರಬಂಧ ಪಾರಾಯಣದ ಮಧ್ಯೆ ಸ್ವಾಮಿ ಭಕ್ತರ ಹೃದಂಘುವನ್ನು ಸೇರಿದ.

ಭಾನುವಾರ ಬ್ರಹ್ಮೋತ್ಸವದ ಅವಭೃಥ. ಸ್ವಾಮಿಯ ಪ್ರತಿನಿಧಿಯಾಗಿ ಚಕ್ರತ್ತಾಳರರಿಗೆ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನ. ಅಸಂಖ್ಯ ಯಾತ್ರಿಗಳು ಚಕ್ರಸ್ನಾನದ ಸಮಯದಲ್ಲಿ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಪುನೀತರಾದರು.

ಬ್ರಹ್ಮೋತ್ಸವದ ಅಂಗವಾಗಿ ತಿರುಮಲೆ

## ರಘುಸುತ ಅವರಿಗೆ ಗೋರೂರು ಪ್ರಶಸ್ತಿ



ರಘುಸುತ ಎಂದೇ ಕರ್ನಾಟಕದ ಜನತೆಗೆ ಪರಿಚಿತರಾಗಿರುವ ಖ್ಯಾತ ಲೇಖಕ ಶ್ರೀ ಕೆ. ಆರ್. ರಂಗಾಚಾರ್ಯ ರಿಗೆ ಗೋರೂರು ಪ್ರತಿಷ್ಠಾನದ ವತಿಯಿಂದ 1993ರ ಗೋರೂರು ಸಾಹಿತ್ಯ ಪ್ರಶಸ್ತಿ ನೀಡ ಲಾಗಿದೆ.

ಕನ್ನಡದ ಹಿರಿಯ ಕವಿ ಶ್ರೀ ಪು. ತಿ. ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ರಘುಸುತ ಅವರನ್ನು ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ. ರು. ಚೆನ್ನಬಸಪ್ಪನವರು ಶಾಲು ಹೊದಿಸಿ ಶ್ರೀಯುತರನ್ನು ಸನ್ಮಾನಿಸಿದರು.

ಅರವತ್ನಾಲ್ಕು ವರ್ಷದ ರಘುಸುತ ಅವರು 79 ಕಾದಂಬರಿಗಳು, 33 ನಾಟ ಕಗಳು, 20 ಭೂಗೋಳಶಾಸ್ತ್ರ ಕೃತಿಗಳು, 90 ವೈಚಾರಿಕ ಸಾಹಿತ್ಯ ಕೃತಿಗಳು ಮೊದ ಲಾಗಿ270 ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ.

ಸಪ್ತಗಿರಿ ಪತ್ರಿಕೆಯಲ್ಲಿ ಹಿಂದೂ ಧರ್ಮ, ಸಾಹಿತ್ಯ ಸಂಸ್ಕೃತಿಯನ್ನು ಕುರಿತಂತೆ ಅಪಾ ರವಾದ ಲೇಖನ ರಾಶಿಯನ್ನು ನೀಡಿರುವ ಶ್ರೀಯುತರು ಮತ್ತೂ ಹೆಚ್ಚಿನ ನಾಡ, ನುಡಿಯ ಧರ್ಮ -- ವಿಜ್ಞಾನ -- ಸೇವೆಗೈಯಲು ಶ್ರೀನಿವಾಸನು ಅನುಗ್ರಹಿಸಲಿ ಎಂದು ಸಪ್ತಗಿರಿ ಹಾರೈಸುತ್ತದೆ.

ಯಲ್ಲಿ ಉದ್ಯಾನವನ ವಿಭಾಗದ ಫಲಪುಷ್ಪ ಪ್ರದ ರ್ಶನವೂ ಏರ್ಪಾಡಾಗಿದ್ದಿತು. ವಿವಿಧ ಹೂ ಹಣ್ಣು ಗಳಿಂದ ನಯನಾನಂದಕರವಾದ ಪ್ರದರ್ಶನವನ್ನು ಜನ ಸಂತಸದಿಂದ ನೋಡುತ್ತಿರುವುದು ಕಂಡುಬಂ ದಿತು. ಜೊತೆಗೇ ಅಲ್ಲಲ್ಲಿ ವಿವಿಧ ಸಸ್ಯ ಪುಷ್ಪಗಳಿಂದ ಸ್ವಾಗತ ಕಮಾನುಗಳು, ಪುರಾಣ ದೃಶ್ಯಗಳು ಮನ ಸೆಳೆಯುವಂತಿದ್ದವು. ಇದು ಬೆಳಗಿನ ಬೆಳಕಿನ ಬಣ್ಣ ವಾದರೆ ರಾತ್ರಿಯ ಹೊತ್ತಿನಲ್ಲಿ ವಿದ್ಯುತ್ ವಿಭಾಗದ ವರಿಂದ ಬಣ್ಣ ಬಣ್ಣದ ವಿದ್ಯುತ್ ದೀಪಗಳು ವಿವಿಧ ಆಕೃತಿಗಳನ್ನು ಪಡೆದು ನೋಟಕರನ್ನು ರಂಜಿಸಿದವು.

## ತಿ. ತಿ. ದೇ. ಆರ್ಥಿಕ ಪರಿಸ್ಥಿತಿ ಸಂತೃಪ್ತಿಕರ

ತಿ. ತಿ. ದೇವಸ್ಥಾನಗಳ ಹಣಕಾಸು ಪರಿ ಸ್ಥಿತಿ ಸಂತೃಪ್ತಿಕರವಾಗಿದೆ. ಹೋದವರ್ಷದ ಇದೇ ಹೊತ್ತಿಗಿಂತ ಇಂದು ಹೆಚ್ಚು ಸಮಾಧಾನಕರವಾಗಿದೆ ಎಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ತಿಳಿಸಿದ್ದಾರೆ.

**ಪ್ರತಿವರ್ಷವೂ ಹತ್ತು ಶತಾಂಶ ಆದಾ ಯದ ಹೆಚ್ಚಳದ ಅಂದಾಜಿನಂತೆ 1993--94 ರ ಅಂದಾಜು ಆದಾಯವನ್ನು 137 ಕೋಟಿ ರೂಗ ಳೆಂದೂ, ಇವರಲ್ಲಿನ ಅತಿ ಹೆಚ್ಚಿನ ಅಂಶ 48.61 ಕೋಟಿ ರೂಪಾಯಿ ಹುಂಡಿಯ ಮೂಲಕ ಬರ ಲಿದೆ ಎಂದೂ, ಆರ್ಜಿತ ಸೇವೆ, ಪ್ರಸಾದಗಳ ಮಾರಾ ಟದಿಂದ 36 ಕೋಟಿ ಆದಾಯವಿದೆಯೆಂದೂ** ನುಡಿದ ಅವರು ಕಲ್ಯಾಣಮಂಟಪ, ಶಿಕ್ಷಣ ಸಂಸ್ಥೆ ಗಳು, ಮತ್ತಿತರ ಬಾಬ್ತುಗಳಿಂದಲೂ ಆದಾಯ ವುಂಟು ಎಂದು ತಿಳಿಸಿದ್ದಾರೆ.

ವ್ಯಯದ ಬಾಬ್ತಿನಲ್ಲಿ ಅತಿಹೆಚ್ಚು ಎಂದರೆ ತಿ.ತಿ.ದೇ. ಗಳ 18,000 ಮಂದಿ ಉದ್ಯೋಗಿಗಳ ಸಂಬಳಕ್ಕಾಗಿ ಆಗುವ ವೆಚ್ಚ 36 ಕೋಟಿ ರೂಗಳು ಎಂದೂ, 24 ಕೋಟಿಗಳು ಕಾರ್ಯಗಳ ವೆಚ್ಚ ವೆಂದೂ ಪ್ರಸಾದ ತಯಾರಿಕೆಯ ಪ್ರೋಕ್ತ 17 ಕೋಟಿ ರೂಗಳು ಎಂದೂ ಅವರು ತಿಳಿಸಿದ್ದಾರೆ.

## ಭೂಕಂಪ ತ್ರಸ್ತರ ಪರಿಹಾರಕ್ಕೆ ತಿ.ತಿ.ದೇ. ಕಾಣಿಕೆ

ಮಹಾರಾಷ್ಟ್ರದಲ್ಲಿ ನಡೆದ ಭೂಕಂಪದಿಂದುಂ ಟಾದ ಅನಾಹುತಗಳಲ್ಲಿ ನೊಂದವರ ಪರಿಹಾರಾ ರ್ಥವಾಗಿ ತಿ. ತಿ. ದೇವಸ್ಥಾನಗಳು ಪ್ರಥಮ ಕಂತಿನ ವಂತಿಗೆಯಾಗಿ ಐದುಲಕ್ಷ ರೂಗಳ ನೆರವನ್ನು ಪ್ರಕ ಟಿಸಿವೆ. ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಕಳು ಹಿಸಲಾದ ಈ ಮೊತ್ತದೊಡನೆ ತಿ. ತಿ. ದೇವ ಸ್ಥಾನಗಳ ಉದ್ಯೋಗಿಗಳು ತಮ್ಮ ಒಂದು ದಿನದ ಸಂಬಳವನ್ನೂ ಸೇರಿಸುವರೆಂದು ವರದಿಯಾಗಿದೆ. ತಿ. ತಿ. ದೇವಸ್ಥಾನಗಳ ಉದ್ಯೋಗಿಗಳ ಒಂದು ದಿನದ ಸಂದಿಳ ಎಂಟು ಲಕ್ಷ ರೂಗಳಿಗಿಂತ ಹೆಚ್ಚಿನ ಮೊತ್ತವಾಗುವುದು.

## ಮದರಾಸಿನಲ್ಲಿ ದಾಸಸಾಹಿತ್ಯೋತ್ಸವ

ಮದರಾಸಿನ ಶ್ರೀ ರಾಘವೇಂದ್ರ ಸೇವಾಭಜನ ಮಂಡಳಿಯ 22ನೇ ವಾರ್ಷಿಕೋತ್ಸವದಲ್ಲಿ ತಿ. ತಿ. ದೇ. ದಾಸಸಾಹಿತ್ಯ ಪ್ರಾಜೆಕ್ಟ್ ನೆರವಿನಿಂದ ದಾಸ ಸಾಹಿತ್ಯೋತ್ಸವವನ್ನು ಅಕ್ಟೋಬರ್ 9, 10, ರಂದು ಯಶಸ್ವಿಯಾಗಿ ಆಚರಿಸಲಾಯಿತು.

ದಾಸಸಾಹಿತ್ಯ ಪ್ರಾಜೆಕ್ಟಿನ 'ಹರಿದಾಸ ದರ್ಶಿನಿ' ಮದರಾಸಿನ ಪರುಶವಾಕ್ಕಂನ ದಾಸಪ್ರಕಾಶದಲ್ಲಿ ಚೇತೋಹಾರಿಯಾಗಿ, ಜನಾಕರ್ಷಕವಾಗಿ ನಡೆ ಯಿತು. 9--10--93 ರಂದು ತುಮಕೂರಿನ ಶ್ರೀ ಪುಷ್ಕರ ಪ್ರಸಾದರು ದಾಸಸಾಹಿತ್ಯದ ವೈಶಿ ಷ್ಟ್ಯವನ್ನೂ ಬೆಂಗಳೂರಿನ ಶ್ರೀ ಪವಮಾನಾಚಾ ರ್ಯರು ದಾಸಸಾಹಿತ್ಯದ ಪರಿಚಯವನ್ನೂ ನೀಡಿ ದರು. 10--10--93 ರಂದು ಮದರಾಸಿನ ನಾಗ ರಾಜ ಅವರು ದಾಸಸಾಹಿತ್ಯದಲ್ಲಿ ಕಂಡುಬರುವ ರುಕ್ಮಿಣೀ ಕಲ್ಯಾಣವನ್ನು ವಿವರಿಸಿದರು. ದಾಸಸಾ ಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪ ಣ್ಣಾಚಾರ್ಯರು ಪ್ರಾಜೆಕ್ಟಿನ ವಿವಿಧ ಮುಖ ಕಾರ್ಯ ಕ್ರಮಗಳನ್ನೂ, ದಾಸಸಾಹಿತ್ಯದ ವಿಶ್ವಮಾನವತೆಯ ಧೋರಣೆಯನ್ನೂ ವಿವರಿಸಿದರು.

ಟ್ರಿಪ್ಲಿಕೇನ್ ಶ್ರೀ ರಾಘವೇಂದ್ರ ಭಜನಾಮಂಡಳಿ ಹಾಗೂ ಮಹಿಳಾ ಸಂಘದ ಭಜನ ಮಂಡಳಿಗಳು ಸಾಮೂಹಿಕ ಭಜನೆ ಕಾರ್ಯಕ್ರಮವನ್ನು ನಡೆಸಿಕೊ ಟ್ಟವು. ಗುರು ಜಗನ್ನಾಥದಾಸ ಭಜನಾ ಮಂಡಳಿಯ ವರು ಶ್ರೀನಿವಾಸ ಕಲ್ಯಾಣ ಸಂಗೀತ ಕಾರ್ಯಕ್ರಮ ವನ್ನು ನಡೆಸಿಕೊಟ್ಟರು. 9--10--93 ರಂದು ಅನ್ನ ಮಾಚಾರ್ಯ ಪ್ರಾಜೆಕ್ಟಿನ ಶ್ರೀ ಜಿ. ರಘುನಾಥರೂ 10--10--93 ರಂದು ಮದರಾಸಿನ ಎಲ್. ರಂಗ ರಾವ್ ಅವರೂ ಸಂಗೀತ ಕಾರ್ಯಕ್ರಮಗಳನ್ನು ನಡೆ ಸಿಕೊಟ್ಟರು. ದಾಸಸಾಹಿತ್ಯದ ವತಿಯಿಂದ ತಿ.ತಿ.ದೇ. ಧಾರ್ಮಿಕ ಸಾಹಿತ್ಯ ವೀಡಿಯೋ ಆಡಿಯೋ ಕ್ಯಾಸೆ ಟ್‌ಗಳ ಮಾರಾಟವೂ ಏರ್ಪಾಡಾಗಿದ್ದಿತು.



## ಸಪ್ತಗಿರಿ

## ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರು ತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

## ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಡಿಸೆಂಬರ್ 1993

**ಚೆನ್ನಕೇಶವರಾಯ**
--ಚೆನ್ನಕೇಶವ

**ದೇವಾಲಯಗಳು**
--ಎಚ್. ವಿ. ನರಸಿಂಹ ಮೂರ್ತಿ

**ಕಂಚಿ ವರದ**
--ಸಿ. ಗೋವಿಂದಾಚಾರ್

**ಜೈಮಿನಿ ಮಹರ್ಷಿ**
--ಕೆ. ಕೇಶವನ್

**ಶ್ರೀಶೈಲ ಕ್ಷೇತ್ರ**
--ಡಿ. ರಾಮಕೃಷ್ಣರಾವ್.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

# ತಿಂಗಳಿನ ಮುಖ್ಯದಿನಗಳು

## ಡಿಸೆಂಬರ್ --- 1993

| | |
|---|---|
| 2. ಗುರುವಾರ | ಕನಕದಾಸರ ಜಯಂತಿ. |
| 6. ಸೋಮವಾರ | ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಾರ್ತೀಕ ಸೋಮ ವಾರಾಭಿಷೇಕ. |
| 16. ಗುರುವಾರ | ಧನುಸ್ಸಂಕ್ರಮಣ. |
| 19. ಭಾನುವಾರ | ಸುಬ್ರಹ್ಮಣ್ಯ ಷಷ್ಠಿ. |
| 24. ಶುಕ್ರವಾರ | ವೈಕುಂಠ ಏಕಾದಶಿ, ಗೀತಾಜಯಂತಿ. |
| 25. ಶನಿವಾರ | ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ. |
| 26. ಭಾನುವಾರ | ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 28. ಮಂಗಳವಾರ | ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ, ದತ್ತಜಯಂತಿ. |
| 29. ಬುಧವಾರ | ಕಪಿಲೇಶ್ವರಸ್ವಾಮಿ ಆರ್ದ್ರಾ ದರ್ಶನೋತ್ಸವ, ತಿರುಮಲೆಯಲ್ಲಿ ಸ್ವಾಮಿ ಪ್ರಣಯಕಲಹೋತ್ಸವ. |



**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ**

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ--

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

